ಸನಾತನಾರ್ಯ ಧರ್ಮ ಗ್ರಂಥಾವಳಿ

# ಸಾಧುವೃತ್ತಿ

ಬೆಂಗಳೂರು ಕಲಾಶಾಲಾ ಪಂಡಿತರಾಗಿದ್ದ

ಗ. ವೈ. ಕೃಷ್ಣಾಚಾರ್ಯರಿಂದ

ರಚಿಸಲ್ಪಟ್ಟುದು

Published by

Supantha Office, T.S., Mysore

ಮೈಸೂರು

[illegible] ಎಲೆಕ್ಟ್ರಿಕ್ ಪ್ರೆಸ್ಸಿನಲ್ಲಿ ಮುದ್ರಿಸಲ್ಪಟ್ಟಿತು

1917

ಕ್ರಯ ೪ ಆಣೆ.

# ಸಾಧುವೃತ್ತಿ



೧. ಅಂತೇವಾಸಿಯ ಅನುಯೋಗ (ಪ್ರಶ್ನೆ)—ಸ್ವಾಮಿನ್ ಉಪಾಧ್ಯಾಯರೇ! ಸಾಧುಗಳು ಯಾರು? ಅವರ ವೃತ್ತಿಯೆಂಬುದು ಯಾವುದು?

ಉಪಾಧ್ಯಾಯನ ಉತ್ತರ—ಸಾಧುಗಳೆಂಬುವರೇ ಶಿಷ್ಟರು, ಅವರ ವೃತ್ತಿಯು ಯಜ್ಞದಾನಾದಿಗಳಿಂದ ಜೀವಿಸುವುದು.

೨. ಅಂತೇ—ಶಿಷ್ಟರು ಯಾರು? ಎಂತಹವರು.

ಉಪಾ—"ಯಜ್ಞದಾನತಪೋವೇದಸತ್ಯೈಃ ಪಞ್ಚಾಭಿರನ್ವಿತಃ। ಶಿಷ್ಟ ಇತ್ಯುಚ್ಯತೇ ವಿಪ್ರಃ" ಎಂದು ಸನತ್ಸುಜಾತೀಯದಲ್ಲಿ ಹೇಳಿರುವ ಮೇರೆಗೆ ಪಂಚಮಹಾಯಜ್ಞಾದಿ ನಿತ್ಯಾಹ್ನಿಕಕರ್ಮಾನುಷ್ಠಾನದಿಂದ ಪಾಪರಹಿತರಾಗಿ, "ತಿತಿಕ್ಷವಃಕಾರುಣಿಕಾ··ಸುಹೃದಃ ಸರ್ವದೇಹಿನಾಮ್ ಅಜಾತಶತ್ರವಃ ಶಾನ್ತಾಃ ಸಾಧವಃ ಸಾಧುಭೂಷಣಾಃ" ಎಂದು ಭಾಗವತ ತೃತೀಯಸ್ಕಂಧದಲ್ಲಿ ಹೇಳಿರುವ ಕಪಿಲವಚನಾನ-ಸಾರವಾಗಿಯೂ, ಶೀತೋಷ್ಣಾದಿ ದ್ವಂದ್ವಗಳವನ್ನು ಸಹಿಸುತ್ತ ಭೂತದಯೆಯಿಂದ ಕೂಡಿ ಶಮದಮಾದಿ ಸಾತ್ವಿಕಗುಣಸಂಪನ್ನರಾದ ಮಹಾತ್ಮರು. ಇವರು ಯದೃಚ್ಛಾಲಾಭಸಂತುಷ್ಟರು, ನಿರ್ಮತ್ಸರರು, ಇವರೆಲ್ಲರೂ ಹಿಂದೆ ನಮ್ಮ ಗೋತ್ರಪ್ರವರ್ತಕರಾಗಿದ್ದ ಮುನಿಗಳು, ಮಹರ್ಷಿಗಳು, ಬ್ರಹ್ಮರ್ಷಿಗಳು, ರಾಜರ್ಷಿಗಳು.

೩. ಅ—ಯದೃಚ್ಛಾಲಾಭವೆಂದರೇನು? ತಿಳಿಯಲಿಲ್ಲವಲ್ಲ.

ಉ—ಯದೃಚ್ಛೆ-ಎಂದರೆ ಸ್ವಾತಂತ್ರ್ಯವು. ತಮ್ಮ ಜೀವನಕ್ಕೋಸ್ಕರ ವಿಶೇಷಪಾರತಂತ್ರ್ಯವೂ, ಅಧಿಕವಾಗಿಯು ಬಹುವಾಗಿಯು ಆಹಾರಾದಿಪದಾರ್ಥಗಳ ಸಂಗ್ರಹವೂ, ಕೇವಲ ಸ್ವೋದರಭರಣಾರ್ಥವಾದ ಪ್ರಯತ್ನಗಳೂ, ಇಲ್ಲದೇ ದೇವರು ಕೊಟ್ಟಷ್ಟರಲ್ಲಿಯೇ ತೃಪ್ತಿಪಡುತ್ತ ಅತ್ಯಾಶೆಪಡದೆ ಸದಾ ಸಂತೋಷದ ಸ್ವಭಾವದವರಾಗಿರುವುದು. ಈ ಸಾಧುಗಳು ವಿಷಯಸೇವನಾಭಿಲಾಷೆಯನ್ನು ತಗ್ಗಿಸುತ್ತ ಕಾರ್ಯಸಿದ್ಧಿಯಾದರೂ ಆಗದಿದ್ದರೂ ಮನೋವಿಕಾರವಿಲ್ಲದೆ ಸಮಚಿತ್ತರಾಗಿರುತ್ತ ಭಗವದ್ಭಕ್ತರಾಗಿ ವಿರಕ್ತಿಯನ್ನು ಹೆಚ್ಚಿಸಿಕೊಳ್ಳುತ್ತಿರುವರು. ಮಹಾತ್ಮರು ಅಜ್ಞಜನರ ಉದ್ಧಾರಾರ್ಥವಾಗಿ ಭಗವತ್ಪ್ರೇರಿತರಾಗಿ ಬಂದು ಲೋಕೋಪಕಾರಮಾಡುತ್ತಿರುವರು.

೪. ಆ—ಅವರೇನು ಸಂನ್ಯಾಸಿಗಳೋ ಮನೆ ಮಕ್ಕಳು ಮುಂತಾದ ಸಂಸಾರವುಳ್ಳವರೋ? ಹಾಗೆ ವೈರಾಗ್ಯದಿಂದಿದ್ದರೆ ಇವರ ಸಂಸಾರದ ಪೋಷಣೆ ಹೇಗಾಗುವುದು?

ಉ—ಆ ಸಾಧುಗಳೆಲ್ಲರೂ ಈ ಚಾತುರ್ವರ್ಣ್ಯ ಚಾತುರಾಶ್ರಮ್ಯದವರೇ. ಅವರು ಕೇವಲ ಸ್ವದಾರಪುತ್ರಾದಿಗಳನ್ನು ಪೋಷಿಸುವುದು ಮಾತ್ರವೇ ಅಲ್ಲದೆ, ಲೋಕವನ್ನೇ ಸ್ವಕುಟುಂಬದಂತೆ ಭಾವಿಸಿಕೊಂಡು ಮಹೋಪಕಾರಮಾಡುತ್ತಿರುವರೆಂದು ತಿಳಿಯಿರಿ.

೫. ಆ—ಹಾಗಿದ್ದಮೇಲೆ ನಮಗಿಂತಲು ಅವರಿಗೆ ಸಂಸಾರ ಹೆಚ್ಚಿದಂತಾಯಿತಲ್ಲವೆ? ಹೆಂಡಿರು ಮಕ್ಕಳಲ್ಲಿ ಅಭಿಮಾನವೂ ಇದ್ದು ವಿರಕ್ತರಾಗಿರುವುದೆಂಬುದು ಹೇಗೆ?

ಉ—ಅವರಿಗೆ ದಾರಪುತ್ರಾದಿ ಭರ್ತವ್ಯಭರಣವು ಅದೊಂದು ಯಜ್ಞರೂಪವಾಗಿ ಸ್ವಧರ್ಮಕ್ಕೇ ಸೇರಿರುವುದರಿಂದ ತದರ್ಥವಾದ ವ್ಯಾಪಾರಗಳನ್ನು ಯಥೋಚಿತವಾಗಿ ನಡೆಯಿಸುತ್ತಿದ್ದರೂ ಅತ್ಯಾಶೆಯನ್ನೂ ವಿಷಯತೃಷ್ಣೆಯನ್ನೂ ಬಿಟ್ಟವರಾದುದರಿಂದ ವಿರಕ್ತರೆಂದು ಹೇಳಿದೆನು.

೬. ಆ—ಸರಿ. ಆ ಸಾಧುಗಳು ಸ್ವಕುಟುಂಬವನ್ನೂ ಕಾಪಾಡಿಕೊಳ್ಳುತ್ತ ಲೋಕಕ್ಕೂ ಉಪಕಾರಮಾಡಬೇಕಾದರೆ ಅಧಿಕಭಾಗ್ಯವುಳ್ಳವರಾಗಿರಬೇಕಲ್ಲವೆ? ಬಡವರಾಗಿದ್ದರೆ ತಮ್ಮ ಹೊಟ್ಟೆಗೆ ಬಟ್ಟೆಗೇ ಸಾಲದವರು ಹೆರವರನ್ನು ಕಾಪಾಡುವುದು ಹೇಗೆ?

ಉ—ಕುಟುಂಬಪೋಷಣಕ್ಕೂ ಲೋಕೋಪಕಾರಕ್ಕೂ ಅಧಿಕಭಾಗ್ಯವಿರಬೇಕೆಂಬುವುದೇನೂ ಅವಶ್ಯವಲ್ಲ. ಇದು ನನ್ನ ಧರ್ಮ-ಇದು ಭಗವತ್ಕೈಂಕರ್ಯರೂಪ-ಅವಶ್ಯಕರ್ತವ್ಯ-ಎಂಬ ಜ್ಞಾನವುಳ್ಳವನಾಗಿ ಸಾತ್ವಿಕಶ್ರದ್ಧೆಯಿಂದ ಪ್ರವರ್ತಿಸುವ ಸಾಧುವಾದ ಸಾಧಕನಿಗೆ ಸ್ವಾಮಿಸಾಹ್ಯವು ತಾನಾಗಿಯೇ ದೊರೆತು ಹಿಡಿದ ಕಾರ್ಯವು ನೆರವೇರುತ್ತ ಬರುವುದು.

೭. ಆ—ಸ್ವಾಮಿ! ಭಾಗ್ಯವಂತರು ಸುಖಿಗಳೋ ಬಡವರು ಸುಖಿಗಳೋ?

ಉ—ಅಯ್ಯಾ! ಐಹಿಕಸುಖವು ಕೂಡ ಪ್ರಾಕ್ತನ ಕರ್ಮಾನುಗುಣವು. ದುಃಖವೂ ಹಾಗೆಯೇ. ಈ ಸುಖದುಃಖಗಳಿಗೆ ಕಾರಣಗಳಾದ ಭಾಗ್ಯ (ಧನ), ಬಡತನಗಳೂ ತತ್ಪೂರ್ವಪೂರ್ವದ ಪುಣ್ಯಪಾಪಗಳಿಗೆ ಸೂಚಕಗಳಾಗಿ ತತ್ಫಲಗಳಾದ ಸುಖ

ದುಃಖಗಳೆಂಬ ಸುವರ್ಣರೇಖೆಯನ್ನು ಸ್ಪಷ್ಟವಾಗಿ ತೋರಿಸಿಕೊಡುವಂತಹ ಒರೆಗಲ್ಲುಗಳು ಎನಿಸಿಕೊಂಡಿವೆಯೆಂದು ಕವಿಗಳು ವರ್ಣಿಸುತ್ತಾರೆ. ಹಾಗೆಯೇ ಮನ್ವಾದಿಮುನಿವಚನವೂ ಉಂಟು.

ಶ್ಲೋ॥ " ಅಧರ್ಮಪ್ರಭವಂಚೈವ ದುಃಖಯೋಗಂ ಶರೀರಿಣಾಮ್ ।
ಧರ್ಮಾರ್ಥಪ್ರಭವಂಚೈವ ಸುಖಸಂಯೋಗ ಮಕ್ಷಯಮ್ ॥"
" ಧರ್ಮಾತ್ಸುಖಂಚ ಜ್ಞಾನಂಚ ಜ್ಞಾನಾನ್ಮೋಕ್ಷೋಽಧಿಗಮ್ಯತೇ "

(ಪ್ರಾಣಿಗಳಿಗೆ ಯಾವ ವಿಧವಾದ ದುಃಖವೇ ಆಗಲಿ ಅಧರ್ಮದಿಂದಲೇ–ನಿಷಿದ್ಧಾಚರಣದಿಂದ-ಉಂಟಾಗುವುದು. ಸರ್ವಸುಖಗಳೂ ಧರ್ಮದಿಂದಲೇ–ವಿಹಿತಾನುಷ್ಠಾನದಿಂದ-ಲಭಿಸುವುವು. " ಧರ್ಮದಿಂದ ಸುಖವು, ಜ್ಞಾನವು; ಆ ಜ್ಞಾನದಿಂದ ಮೋಕ್ಷಾನಂದವು-ಪ್ರಾಪ್ತವಾಗುವುದು ") ಎಂದಿರುವುದರಿಂದ ಸುಖಕ್ಕೆ ಸ್ವಧರ್ಮಾಚರಣವೇ ಕಾರಣವು.

ಲ. ಆ—ತಾವು ಹೇಳುವ ಶಾಸ್ತ್ರಾರ್ಥವೇನೋ ಸರಿಯೇ–ಪ್ರಕೃತದಲ್ಲಿ ನನ್ನ ಪ್ರಶ್ನೆಯು ಲೋಕದಲ್ಲಿ ಭಾಗ್ಯವಂತಗೆ ಸುಖವಧಿಕವೋ? ಬಡವಗೆ ಸುಖವಧಿಕವೋ ? ಎಂದು.

ಉ—ಸರಿ. ನಿನ್ನ ಪ್ರಶ್ನೆಯು ಸಾಮಾನ್ಯವಲ್ಲ. ವಿಶೇಷ ವಿಚಾರಾರ್ಹವಾಗಿದೆ. ಮೊದಲು ಭಾಗ್ಯ, ಬಡತನ, ಇವುಗಳ ಲಕ್ಷಣವನ್ನು ತಿಳಿದು; ಬಳಿಕ ತತ್ಸುಖಗಳ ತಾರತಮ್ಯವನ್ನು ತಿಳಿಯಬೇಕಾಗಿದೆ. ಅದರಿಂದ ಸಾವಧಾನದಿಂದ ವಿಮರ್ಶೆ ಮಾಡಿಕೊಳ್ಳುತ್ತ ಬಾ. ಕ್ರಮವಾಗಿ ವಿಷಯಗಳನ್ನು ಹೇಳುವೆನು. ಮೊದಲು ಭಾಗ್ಯ ಎಂದರೇನು? ಧನ ವಸ್ತುವಾಹನಾದಿಯೆಂದು ಮಾತ್ರವಲ್ಲ. ದೈವ, ಪೂರ್ವಪುಣ್ಯ, ಎಂದರ್ಥವು. ಆ ಪುಣ್ಯವು ಧರ್ಮಾಚರಣದಿಂದಲೇ ಲಭಿಸುವುದು. ತತ್ಫಲವೇ ಧನಧಾನ್ಯದಾರಪುತ್ರಾದಿಭೋಗವು. ಈ ಲೋಕದ ಸರ್ವವೈಷಯಿಕಸುಖವೂ ತತ್ಸಾಧನಾಧೀನವು. ಯಾವಯಾವ ಸುಖಕ್ಕೆ ಏನೇನು ಸಾಧನವು-ವಸ್ತುಗಳು–ಬೇಕೋ ಅದು ಈ ಭೂಮಿಯಲ್ಲಿ ಧನಾಧೀನವಾಗಿರುವುದರಿಂದ " ಧನವಾನ್ ಸುಖೀ ", ಎಂದು ಪ್ರಸಿದ್ಧವೇ ಆಗಿದೆಯಲ್ಲವೇ ? ಬಡವಗೆ ಆ ಭೋಗ್ಯವಸ್ತುಗಳು ದುರ್ಲಭಗಳಾಗಿರುವುದರಿಂದ ಆ ವೈಷಯಿಕಸುಖವೂ ಅವಗೆ ಅಲ್ಪವೇ ಆಗುವುದು. ಆದರೆ ಜ್ಞಾನಾನಂದಾದಿಗಳೂ, ಆಯುರಾರೋಗ್ಯ ಬಲ ಪುಷ್ಟಿ ವೀರ್ಯಾದಿಗಳೂ, ಆದ್ಯಂತ ಪುರುಷಾರ್ಥಗಳೂ, ಧರ್ಮಮೋಕ್ಷಗಳೂ ಆ ನಿಯಮಕ್ಕೆ ಒಳಪಡದೆ ವಿಪರೀತಗಳಾಗಿ ಕಾಣಬರುತ್ತಿವೆ.

೯. ಅ—ಅದೇನು ಆ ವಿಪರೀತವು ? ಬಡವನು ಜ್ಞಾನಿ ಭಾಗ್ಯವಂತನು ಅಜ್ಞಾನಿ ಎಂದೊ ? ಬಡವನೇ ಮೋಕ್ಷಾಧಿಕಾರಿ ; ಭಾಗ್ಯವಂತನಿಗೆ ಮೋಕ್ಷವಿಲ್ಲ ವೆಂದೊ ?

ಉ—ಹಾಗಲ್ಲ ; ಕೇಳಿರಿ. ಎಲ್ಲಕ್ಕೂ ಒಂದೇ ಸಾಮಾನ್ಯವಿಧಿಯನ್ನು ಮಾಡಿಕೊಳ್ಳಬಾರದು. ಶಾಸ್ತ್ರವು ಲೋಕವು ಕೂಡ ಬಹುವಾಗಿ ಉತ್ಸರ್ಗಾಪವಾದ ವುಳ್ಳುದಾಗಿದೆ. ಅದರಿಂದ ಶಾಸ್ತ್ರವನ್ನು ಲೋಕಾನುಭವದಿಂದಲೂ, ಲೋಕಾನು ಭವವನ್ನು ಶಾಸ್ತ್ರದೃಷ್ಟಿಯಿಂದಲೂ ಸಮನ್ವಯಮಾಡಿಕೊಳ್ಳುತ್ತ ಬರಬೇಕು. ಜ್ಞಾ ನಾಜ್ಞಾನಗಳು ಧನಕ್ಕೂ ದಾರಿದ್ರ್ಯಕ್ಕೂ ಸಂಬಂಧಿಸಿದುದಲ್ಲವೆಂದು ತಿಳಿಯಿರಿ. ಈ ಬಡವರ ಬಾಳಿನ ವಿಷಯವಾಗಿ ಒಂದುಪನ್ಯಾಸವುಂಟು. ಅದನ್ನು ಕೇಳಿದಮೇಲೆ ಚೆನ್ನಾಗಿ ಮನನಮಾಡಿ ನೀವೇ ನಿಶ್ಚಯಿಸಿಕೊಳ್ಳಬೇಕು.

೧೦. ಅ—ಅದೇನೋ ಅಪ್ಪಣೆಯಾಗಲಿ? ನಿಮ್ಮುಪನ್ಯಾಸ ಮುಗಿಯುವ ವವರೆಗೂ ಪ್ರಶ್ನೆಮಾಡುವುದಿಲ್ಲ.

ಉ—" ಮತಿಮತಾಂ ಚ ವಿಲೋಕ್ಯ ದರಿದ್ರತಾಂ ವಿಧಿರಹೋ ಬಲವಾನಿತಿ ಮೇ ಮತಿಃ " ಎಂದು ಭರ್ತೃಹರಿ ಹೇಳಿದಮೇರೆಗೆ ಲೋಕದಲ್ಲಿ ಪ್ರಾಯಿಕವಾಗಿ ದಾರಿ ದ್ರ್ಯ ಋಣದೋಷಾದಿಗಳು ಅಧರ್ಮದಿಂದ ಉಂಟಾಗುವುವೆಂದೂ, ಈ ಧರ್ಮಾಧರ್ಮ ಗಳ ಕಾರ್ಯಗಳೇ ಪುಣ್ಯಪಾಪಗಳೆಂದೂ, ಆ ಪುಣ್ಯಪಾಪಗಳ ಫಲರೂಪಗಳೇ ಐಹಿಕಾ ಮುಷ್ಮಿಕಗಳಾದ ಸುಖದುಃಖಗಳೆಂದೂ, ಧರ್ಮಶಾಸ್ತ್ರವು ಏಕಮುಖವಾಗಿ ಸಾರು ತ್ತಿದೆ. ಈಗ ಧನಿಕನು ಸುಖಪಡುವನೆಂದು, ದರಿದ್ರನು ದುಃಖಪಡುವನೆಂದು, ಎಲ್ಲರೂ ತಿಳಿದೇ ಇರುವರಷ್ಟೆ? ಆ ದುಃಖಹೇತುವಾದ ದಾರಿದ್ರ್ಯವೇತರಿಂದ ಪ್ರಾಪ್ತವಾಗು ವುದೆಂಬ ವಿಚಾರದಲ್ಲಿ ಶಾಸ್ತ್ರವು:—

ಶ್ಲೋ|| ಅದಾನ ದೋಷೇಣ ಭವೇ ದ್ದರಿದ್ರಃ ದಾರಿದ್ರ್ಯದೋಷೇಣ ಕರೋತಿ ಪಾಪಂ |
ಪಾಪಾದವಶ್ಯಂ ನರಕಂ ಪ್ರಯಾತಿ ಪುನರ್ದರಿದ್ರಃ ಪುನರೇವ ಪಾಪೀ ||

ಹೀಗೆ ಈ ಲೋಕದ ಬಡತನ ಭಾಗ್ಯಗಳು ಪಾಪಪುಣ್ಯ ಮೂಲಗಳೆಂದು ತಿಳಿದು " ಕೊಟ್ಟಂಗೆ ಬಡತನಂ ಬಂದಪುದೆ ? ಬಿತ್ತಂ ಬಿತ್ತದ ನರಂಗೆ ಬೆಳಸೆತ್ತ ಣದೋ ? " ಎಂಬ ಸುಭಾಷಿತಗಳು ಪ್ರಸಿದ್ಧಗಳಾಗಿವೆ. ಅದರಿಂದ ಹಿಂದಿನ ಹುಟ್ಟಿ ನಲ್ಲಿ ದಾತೃಪ್ರತಿಗ್ರಹೀತೃಗಳಾಗಿದ್ದಂತಹ ಧನಿಕದರಿದ್ರರು ಈ ಹುಟ್ಟಿನಲ್ಲಿ ಅದರ ಬೆಳೆ ಯನ್ನು (ಸುಖದುಃಖವನ್ನು) ಅನುಭವಿಸಲು ' ಭಾಗ್ಯವಂತ, ಬಡವ ' ಎನಿಸಿಕೊಂಡಿ

ದ್ದಾರೆ ಎಂದು ಹೇಳಿರುವ ಮುನಿವಚನಗಳಿಂದ ಭಾಗ್ಯ ಬಡತನಗಳಿಗೆ ದಾನಾದಾನಗಳೇ ಕಾರಣಗಳೆಂದು ಫಲಿತವಾಯಿತಷ್ಟೆ. ದಾನ-ಕೊಡುವುದು, ಆದಾನ-ತೆಗೆದುಕೊಳ್ಳುವುದು ಎಂಬುದು ಸನಾತನಾರ್ಯಧರ್ಮದ ಕರ್ಮಪದ್ಧತಿಯಲ್ಲಿ (ಯಜ್ಞದಾನ ತಪಸ್ಸುಗಳಲ್ಲಿ) ಇದೊಂದು ಮುಖ್ಯಭಾಗವಾಗಿ ಯಜ್ಞರೂಪವೆನಿಸಿಕೊಂಡು ಈ ಪ್ರಪಂಚದ ಬಾಳಿಕೆಗೆಲ್ಲಕ್ಕು ಆಧಾರಸ್ತಂಭದಂತೆ ಏರ್ಪಟ್ಟಿದೆ. ಈ ದಾನಾದಾನರೂಪವಾದ ಯಜ್ಞವು ಸರ್ವಜನಸಾಧಾರಣವಾದರೂ ಅದರಲ್ಲಿಯು ಭಾಗ್ಯವಂತನಾದುಪಪನ್ನನು ವಿಶೇಷವಾಗಿ ಕೊಡತಕ್ಕವನಾಗಿಯೂ, ಅನುಪಪನ್ನ-ಪಾಪಿ-ಪರದೇಶಿಯೆನಿಸಿದಂತಹ ಬಡವನು ತೆಗೆದುಕೊಳ್ಳುವನಾಗಿಯೂ, ಏರ್ಪಟ್ಟಿರುವುದು ಸಹಜವಾಗಿದೆ. ಇದರಿಂದಲೇ ಲೋಕದಲ್ಲಿ "ಪಾಲಕಿಯಲ್ಲಿ ಮಂಡಿಸುವನು ಅರಸು, ಅದನ್ನು ಹೊರುವನು ಆಳು" ಹೀಗೆ ಈ ಯರಸಾಳ್ತನವೇ ಮುಂತಾದ ಪ್ರಪಂಚದ ಉಚ್ಚಾವಚವ್ಯಾಪಾರಗಳೆರಡೂ ಈಶ್ವರೇಚ್ಛೆಯಿಂದಲೇ ನಡೆಯುತ್ತಿದೆ. ಪ್ರಾಣಿಗಳ ಸುಖದುಃಖ ತಾರತಮ್ಯವು ಕೂಡ ತತ್ತತ್ಪೂರ್ವಪೂರ್ವ ಕರ್ಮಾನುಗುಣವಾಗಿ ಈಶ್ವರೇಚ್ಛೆಯಿಂದಲೇ ಪ್ರಾಪ್ತವಾಗುತ್ತಿದೆ. ಹೀಗಿರುವಾಗ ಲೋಕದಲ್ಲಿ ರೈತನು ಎಷ್ಟು ಬೀಜವನ್ನು ಬಿತ್ತುವನೋ ಅದಕ್ಕೆ ಬರುವಷ್ಟು ಬೆಳೆಯನ್ನು ತೆಗೆದುಕೊಳ್ಳುವನು. ಬಿತ್ತದವನಿಗೆ ಬೆಳೆಯು ಲಭಿಸದು, ಎಂಬುದು ಎಲ್ಲರಿಗೂ ಅನುಭವಸಿದ್ಧವಾಗಿದ್ದರೂ; ಈಗ ಬೀಜವಿಲ್ಲ, ಬಿತ್ತಲಿಲ್ಲ, ಬೆಳೆ ಮಾತ್ರ ಬೇಕೆಂದು ಬಯಸುವಂತೆ ಬಡವರೂ ತಮ್ಮ ಪೂರ್ವಕರ್ಮಾನುಸಾರವಾಗಿ ಪ್ರಾಪ್ತವಾಗಿರುವುದನ್ನು ಮನಸ್ತೃಪ್ತಿಯೊಡನೆ ಸಂತೋಷದಿಂದ ಅನುಭವಿಸಿಕೊಂಡು ಮನಃಸಂತೋಷದಿಂದ ಸುಖವಾಗಿರದೆ ಧನಿಕರಾದ ಭಾಗ್ಯವಂತರ ದಶೆಯನ್ನು ನೋಡಿ ಅದು ತಮಗೆ ಬೇಕೆಂದು ಬಯಸಿಕೊಂಡು ತಮಗೆ ಸಹಜವಾಗಿದ್ದ ಬಡತನದ ಕಷ್ಟದ ಜತೆಗೆ ಪೇರಾಸೆಯಿಂದ ಮತ್ತಿಷ್ಟು ಕಷ್ಟಗಳನ್ನು ಸಂಪಾದಿಸಿಕೊಳ್ಳಲು ಯತ್ನಿಸುತ್ತಿರುವರೆಂಬುದಿದೊಂದೇ ಶೋಚನೀಯವಾಗಿದೆ.

೧೧. ಅ—ಆದರೆ ಬಡವರು ಭಾಗ್ಯವಂತರ ದಶೆಯಂ ಬಯಸಿದರೆ ಬರುವುದೆ ? ಅಥವಾ ಬಯಸಿದ ಮಾತ್ರಕ್ಕೆ ಕೆಡುವುದೇತಕ್ಕೆ ?

ಉ—ಭಾಗ್ಯಸಂಪನ್ನರು ಪ್ರಮತ್ತತೆಯಿಂದ ಕೆಡುವಂತೆ ಬಡವರು ಅವರನ್ನು ಅನುಕರಿಸಿ ಉಡುಗೆ ತುಡುಗೆಗಳ ಮೋಹದಿಂದ ಕೆಡುವರು. ಅದೆಂತೆಂದರೆ—ಗ್ರಾಮಭೂಮಿ ಮನೆ ತೋಟ ವಿವಿಧ ವಸ್ತುವಾಹನಾದಿಗಳು ಯಥೇಷ್ಟ ಸುವರ್ಣ ರತ್ನರಜತಾದಿ ಧನವು ಉಳ್ಳ ಪುಣ್ಯವಂತರು ವಿವಾಹಾದಿ ಮಹೋತ್ಸವ ಕಾಲಗಳಲ್ಲಿಯೂ

ಹಬ್ಬವಾರಗಳಲ್ಲಿಯೂ ಚಿನ್ನರನ್ನಗಳ ತೊಡವುಗಳಿಂದಲೂ ಚೀನಾಂಬರ ಪೀತಾಂಬರಾ ದಿಗಳಿಂದಲೂ ಭೂಷಿತರಾಗಿ ಮಹಾ ವಿಭವದಿಂದ ಮೆರೆಯುವುದೇನೊ ಯುಕ್ತವೇ ಸರಿ. ಯಾವುದೊಂದು ಸ್ಥಿರವಾದ ಸ್ಥಿತಿಯು, ಚರವಾದ ಸಿರಿಯು, ಇಲ್ಲದೆ ಬಡವ ರೆನಿಸಿಕೊಂಡಿರುವರು ತಾವು ಸಂಪಾದಿಸಿದುದು ತಮ್ಮ ಕುಟುಂಬದ ಹೊಟ್ಟೆ ಬಟ್ಟೆ ಯ ವೆಚ್ಚಕ್ಕೆ ಕೂಡ ಸಾಕಾಗದಿದ್ದರೂ ಸಾಲವಾದರೂ ಮಾಡಿ ಮಕ್ಕಳಿಗೆ ಮುದ್ದಿ ಗಾಗಿ ಬಾಲ್ಯದಲ್ಲಿಯೇ ಮದುವೆಮಾಡಿ ಹೆರವರಲ್ಲಿ ಎರವಿನ ಉಡುಗೆ ತುಡುಗೆಗಳನ್ನು ತಂದು ತಾವು ಧರಿಸಿಕೊಂಡು ಮೆರೆವುದಲ್ಲದೆ ಮಕ್ಕಳ ಕಿವಿ ಮೂಗುಗಳನ್ನು ಹತ್ತೆಂ ಟು ತೂತುಮಾಡಿ ಆ ಯೆರವಿನ ಒಡವೆಗಳ ಹೊರೆಯನ್ನು ಹೊರಿಸುತ್ತ ಕಳ್ಳಕಾಕರಿ ಗೀಡುಮಾಡಿ ಆ ಮಕ್ಕಳನ್ನೇ ಮೃತ್ಯುಮುಖಕ್ಕೆ ಒಪ್ಪಿಸಿ ತಾವೂ ಪ್ರಾಣಾಪಾಯಕ್ಕೆ ಸಿಕ್ಕಿ ನರಳುತ್ತ ಇರುವವರನ್ನು ನಿತ್ಯವು ಎಲ್ಲರೂ ನೋಡುತ್ತಿದ್ದರೂ ಇನ್ನೂ ಯಾ ರಿಗೂ ಈ ಒಡವೆಗಳ ಮೋಹವು ಲೇಶವು ಬಿಡಲಿಲ್ಲವು. ಇದೇನು ಸುಖವೇ ? ನರಿ ಹುಲಿಯೊಡಲಂ ಬಯಸಿ ಬರೆಯನ್ನಿಟ್ಟುಕೊಂಡಿತೆಂಬಂತೆ ಬಡವರು ಭಾಗ್ಯವಂತರ ಅಲಂಕಾರದ ಸುಖವಂ ಬಯಸಿ ಕೆಡುತ್ತಿರುವುದು ದೊಡ್ಡ ತಪ್ಪು. ಮತ್ತೊಂದು ದೋಷವು ಧನವಂತರ ಮನೆಯಲ್ಲಿ ಬೀಗತನದ ನಾಗರಿಕತೆಯಂ ತೋರಿಸುವಾಗ ಎಲೆ ಗಳಲ್ಲಿ ಅಲಂಕಾರಕ್ಕೆಂದು ಪದಾರ್ಥಗಳನ್ನು ಬಗೆಬಗೆಯಾಗಿ ಮಾಡಿ ಬಡಿಸಿ ತಿನ್ನಲಾ ರದೆ ಬಿಸಾಡುತ್ತಿರುವಂತೆ ಬಡವರು ಕೂಡ ಅದನ್ನು ಅನುಕರಿಸುತ್ತಿರುವುದು.

ಭಾಗ್ಯವಂತರು "ನನಗೇನು ಕೊರತೆ ? ನನ್ನಷ್ಟು ಸುಖವು ಮತ್ತಾರಿಗುಂ ಟು ? ನನಗಸಾಧ್ಯವಾದುದೇನಿದೆ ?" ಎಂಬ ಧನಮದಾಹಂಕಾರಕ್ಕೊಳಗಾಗಿ, ಆ ಹಾರ ವಿಹಾರಾದಿಗಳಲ್ಲಿ ಮಿತಿಮೀರಿ ದಿನಕ್ಕೆ ನಾಲ್ಕೈದು ವೇಳೆ ಅನ್ನಪಾನಗಳನ್ನು ಅಕ್ರಮದಿಂದುಪಯೋಗಿಸುತ್ತ ಅನಾರೋಗ್ಯಾಲ್ಪಾಯುಷ್ಕರಾಗಿ ಕೆಡುತ್ತಿರುವುದು ಧನಿಕರಲ್ಲಿರುವ ದೊಡ್ಡತಪ್ಪು. ಇವೆರಡು ದೋಷಾಂಶಗಳನ್ನೂ ಬಿಟ್ಟರೆ ಉಳಿದ ನಿದ್ರಾ ಹಾರವಿಹಾರ ಮುಂತಾದ ದೇಹಸೌಖ್ಯದಲ್ಲಿಯೂ, ವಿದ್ಯಾವಿನಯ ವಿವೇಕಾದಿಗಳ ಲ್ಲಿಯೂ ಇತರ ಕಲಾನೈಪುಣ್ಯಾದಿ ಸುಖದಲ್ಲಿಯೂ, ಜನನಮರಣ ಮನೋರೋಗ ಶಾರೀರರೋಗಾದಿ ದುಃಖದಲ್ಲಿಯೂ, ಭಾಗ್ಯವಂತನಿಗೂ ಬಡವನಿಗೂ ಭೇದವೇನಿದೆ ?

ಆದರೆ ಲೋಕದಲ್ಲಿ "ಯಾರಿಗೆ ವಸ್ತುವಾಹನಾದಿ ಭೋಗ್ಯಸಾಮಗ್ರಿ ಅಧಿಕ ವಾಗಿವೆಯೋ ಅವರಿಗೆ ಸುಖವು. ಯಾರಿಗಿಲ್ಲವೋ ಅವರೇ ಬಡವರು. ಅವರಿಗೆ ಸುಖ ವಿಲ್ಲ." ಎಂಬೀ ಲೋಕವಾರ್ತೆಯು ಅವಿಚಾರಿತ ರಮಣೀಯವು. ಸುಖದುಃಖಗಳ ಸ್ವರೂಪವಿಚಾರವಿಲ್ಲದ ಪಾಮರರ ರೂಢಿಯೆಂದರಿಯಬೇಕು. ಅದೇಕೆಂದರೆ—

“ ಅರ್ಥ ಮನರ್ಥಂ ಭಾವಯ ನಿತ್ಯಂ | ನಾಸ್ತಿ ತತಃ ಸುಖಲೇಶಃ ಸತ್ಯಂ ||
ಪುತ್ರಾದಪಿ ಧನಭಾಜಾಂ ಭೀತಿಃ | ಸರ್ವತ್ರೈಷಾ ವಿಹಿತಾ ನೀತಿಃ || ”

(ಹಣವನ್ನು ಕೇಡೆಂದು ತಿಳಿಯಬೇಕು. ಅದರಿಂದ ಕೊಂಚವು ಸುಖವಿಲ್ಲವು. ಹಣವಂತಗೆ ತನ್ನ ಮಗನಿಂದ ಕೂಡ ಭಯವುಂಟಾಗುವುದು. ಈ ನೀತಿಯು ಎಲ್ಲರಲ್ಲಿಯು ಒಂದೇ.) ಎಂದು ಹೇಳಿರುವ ಶ್ರೀ ಶಂಕರಾಚಾರ್ಯರ ಮಾತು ಹುಸಿಯಲ್ಲ. ಸರ್ವಾನುಭವಸಿದ್ಧವಾಕ್ಯರತ್ನವೆಂದು ಭಾವಿಸಬೇಕು. ಆದರೆ ಅವರು ಸನ್ಯಾಸಿಗಳು. ಕಾಡಿಗೆ ಹೋಗಲು ಸಿದ್ಧರಾದವರಿಗೆ ಮಾತ್ರ ನಿವೃತ್ತಿಧರ್ಮವನ್ನು ಬೋಧಿಸಿದರ್ರೆಂದೂ ಆ ನೀತಿಯು ಸಂಸಾರಿಗಳಾಗಿ ಮನೆಯಲ್ಲಿದ್ದು ಬದುಕಿ ಬಾಳತಕ್ಕವರಿಗೆ ಹೇಳಿದುದಲ್ಲವೆಂದೂ ವಿಪರೀತವಾಗಿ ತಿಳಿಯಕೂಡದು. “ ಸರ್ವತ್ರೈಷಾ ” ಎಂದಿರುವುದರಿಂದ ವರ್ಣಾಶ್ರಮಿಗಳಿಗೆಲ್ಲರಿಗು ಅವರವರ ಈ ದೇಹಧಾರಣಕ್ಕೆ ಬೇಕಾಗುವಷ್ಟು ಧನದಿಂದ ಮಾತ್ರವೇ ಅವರವರು ತೃಪ್ತರಾಗಿರಬೇಕಲ್ಲದೆ ಯೋಗ್ಯತೆಗೆ ಮೀರಿದ ಅಧಿಕ ಧನಾಶೆಯು ಕೇಡನ್ನುಂಟುಮಾಡುವುದರಿಂದ ಯಾರಿಗೂ ಬೇಡವೆಂದು ತಾತ್ಪರ್ಯವು. ಇದಲ್ಲದೆ “ ನವಿತ್ತೇನ ತರ್ಪಣೀಯೋ ಮನುಷ್ಯಃ ”—(ಹಣದಿಂದ ಮನುಷ್ಯನನ್ನು ತೃಪ್ತಿಪಡಿಸಲಾಗುವುದಿಲ್ಲ) ಎಂದು ಶ್ರುತಿಯು ಸಾರುತ್ತಿದೆ. ಆ ವಿತ್ತವು ಪೂರ್ವಕರ್ಮಾನುಸಾರವೇ ಪ್ರಾಪ್ತವಾಗುವುದಲ್ಲದೆ ತಾತ್ಕಾಲಿಕ ಯತ್ನದಿಂದ ಲಭಿಸುವುದು ಎಂಬುದು ಅಲ್ಪವಾಗಿ ಆ ಪ್ರಯತ್ನಾನುಗುಣವಾಗಿರುವುದು. ಅಮಿತಧನಲಾಭವು ಪ್ರಾಕ್ಕರ್ಮಸಂಬಂಧವೇ ಎಂದು ತಿಳಿಯಬೇಕು.

ಈ ಲೋಕದಲ್ಲಿ ಮನುಷ್ಯಗೆ ಸಿದ್ಧಾನ್ನಪಾನಶಯ್ಯಾಸನಾದಿಗಳಿಂದ ಉಂಟಾಗುವ ತೃಪ್ತಿಯು ಇತರ ವಸ್ತುವಾಹನಾದಿ ಭೋಗಸಾಧನಗಳಿಂದ ಎಂದಿಗೂ ಆಗದು. ಮಾನಸವಾದ ಮನೋರಥಗಳಂತೂ ಒಂದರಹಿಂದೆ ಮತ್ತೊಂದು ಉಂಟಾಗುತ್ತಿರುವುದಲ್ಲದೆ ಇನ್ನು ಸಾಕು ಎಂಬ ಅಲಂಬುದ್ಧಿಯುಂಟಾಗುವುದಿಲ್ಲವೇ ಇಲ್ಲ.

ಶ್ಲೋ|| ನ ಜಾತು ಕಾಮಃ ಕಾಮಾನಾ ಮುಪಭೋಗೇನ ಶಾಮ್ಯತಿ |
ಹವಿಷಾ ಕೃಷ್ಣವರ್ತ್ಮೇವ ಭೂಯ ಏವಾಭಿವರ್ಧತೇ || ಮ ೨-೯೪ ||

(ಅಗ್ನಿಯನ್ನು ತುಪ್ಪದಿಂದ ಆರಿಸತೊಡಗಿದರೆ ಹೇಗೆ ಜ್ವಾಲೆಯೇರುವುದೋ ಹಾಗೆ ಇಂದ್ರಿಯಗಳಿಗೆ ಪ್ರೀತಿಕರವಾದ ವಿಷಯಗಳನ್ನು ಕೊಡುತ್ತ ಬರುವುದರಿಂದ ಕಾಮವು ಕಡಮೆಯಾಗದೆ ಹೆಚ್ಚುವುದು.) ಎಂದಿರುವುದರಿಂದ ಭಾಗ್ಯವಂತರನ್ನು ನೋಡಿಕೊಂಡು ಬಡವರು ಮೊದಲು ಮಾನಸವಾದ ಬಯಕೆಗಳನ್ನು ಹೆಚ್ಚಿಸಿಕೊಂಡು,

ಒಳಿಕ ಅದನ್ನು ನೆರವೇರಿಸಿಕೊಳ್ಳಲು ಸಾಧ್ಯವಾಗದೆ ಆ ಧನಿಕರಿಗೆ ದಾಸರಾಗುತ್ತ ಋಣಗ್ರಸ್ತರಾಗಿ ದುಃಖಿಸುವುದೊಂದು ದೋಷವು. ಅದರಿಂದ ಬಯಕೆಯುಂಟಾದಾಗಲೇ ತನ್ನ ಯೋಗ್ಯತಾ ಕಾಲ ದೇಶಾವಸ್ಥಾದಿಗಳನ್ನು ಚಿಂತಿಸಿ ಅಯೋಗ್ಯವಾದ ಅಸಾಧ್ಯವಾದ ಮಾನಸೇಚ್ಛೆಗಳನ್ನು ಆಗಾಗಲೇ ತಡೆದುಬಿಡುತ್ತ ಬರುವ ಅಭ್ಯಾಸ ಮಾಡಬೇಕು. ಈ ವಿಷಯದಲ್ಲಿ ಎಲ್ಲರೂ ಯಯಾತಿರಾಜನ ಚರಿತವಂ ಸ್ಮರಿಸುತ್ತಿರಬೇಕು. ಆತನು ಇಂದ್ರಿಯವಿಷಯಸೌಖ್ಯಕ್ಕೆ ಒಳಗಾಗಿ ಯೋಗವುಹಿಮೆಯಿಂದ ತನ್ನ ಮುದಿತನವನ್ನು ಮಗನಿಗೆ ಕೊಟ್ಟು ಮಗನ ಪ್ರಾಯವನ್ನು ತಾನು ತೆಗೆದುಕೊಂಡು ಸಾವಿರಾರು ವರ್ಷಗಳು ಸುಖಪಟ್ಟು, ಪಾರಗಾಣದೆ ಪರ್ಯವಸಾನದಲ್ಲಿ ಹೀಗೆ ಹೇಳಿಕೊಂಡು ತೃಷ್ಣೆಯಂ ತ್ಯಜಿಸಿ ಸ್ವಸ್ಥನಾದನು. ಅದೇನೆಂದರೆ:—

ಶ್ಲೋ॥ " ಯತ್ಪೃಥಿವ್ಯಾಂ ವ್ರೀಹಿಯವಂ ಹಿರಣ್ಯಂ ಪಶವಃ ಸ್ತ್ರಿಯಃ ।
ನಾಲ ಮೇಕಸ್ಯ ಭೋಗಾಯ ತಸ್ಮಾತ್ತೃಷ್ಣಾಂ ಪರಿತ್ಯಜೇತ್ ॥ "
" ಮನೋರಥಾನಾಂ ನ ಸಮಾಪ್ತಿರಸ್ತಿ ವರ್ಷಾಯುತೇನಾಪ್ಯಥವಾಪಿ ಲಕ್ಷೈಃ ।
ಪೂರ್ಣೇಷು ಪೂರ್ಣೇಷು ಮನೋರಥಾನಾ ಮುತ್ಪತ್ತಯಃ ಸನ್ತಿ ಪುನರ್ನವಾನಾಮ್ ॥
ಯಚ್ಚ ಕಾಮಸುಖಂ ಲೋಕೇ ಯಚ್ಚ ದಿವ್ಯಂ ಮಹತ್ಸುಖಮ್ ।
ತೃಷ್ಣಾಕ್ಷಯಸುಖಸ್ಯೈತೇ ನಾರ್ಹತಃ ಷೋಡಶೀಂ ಕಲಾಮ್ ॥ "

(ಈ ಭೂಮಿಯಲ್ಲಿರುವ ಸರ್ವಧನಧಾನ್ಯಪಶುಗಳು, ಸ್ತ್ರೀಯರು ಕೂಡ ಒಬ್ಬನ ಸುಖಕ್ಕೇ ಸಾಲದು. ಆದರಿಂದಾಶೆಯಂ ಬಿಡಬೇಕು. ಮನದ ಬಯಕೆಗೆ ಪಾರವೇ ಇಲ್ಲ. ಒಂದು ಹಿಂಗಿದರೆ ಮತ್ತೊಂದು ಹೊಂಗುವುದು. ಐಹಿಕ ವಿಷಯ ಸುಖವಾಗಲಿ, ಆಮುಷ್ಮಿಕ ದೇವಸುಖವಾಗಲಿ, ಪೇರಾಸೆಯಂ ಬಿಟ್ಟಿರುವ ಸುಖದೊಳಗೆ ಒಂದು ಕಲಾ ಮಾತ್ರವಾಗಿರದು.)

ಈ ಲೋಕದಲ್ಲಿ ಪಶುಪಕ್ಷಿಮೃಗಾದಿ ಸರ್ವ ಪ್ರಾಣಿವರ್ಗವೂ ಈ ವೈಷಯಿಕ ಸುಖಕ್ಕೆ ಒಳಗಾಗಿದೆ. ಮನುಷ್ಯನೂ ಅಂತೆಯೇ ಆದರೂ ಬುದ್ಧಿಯಲ್ಲಿ ಶ್ರೇಷ್ಠನಾದುದರಿಂದ ಇದಕ್ಕೆ ಮೇಲ್ಪಟ್ಟ ದೇವಲೋಕಾದಿ ಸೌಖ್ಯಕ್ಕಾಶಿಪಟ್ಟು ಕರ್ಮಬದ್ಧನಾಗಿ ತನತನಗೆ ಶಕ್ಯವಾದಷ್ಟು ಯಜ್ಞದಾನತಪಃ ಕರ್ಮಾನುಷ್ಠಾನದಿಂದ ಉತ್ತರೋತ್ತರಾಭಿವೃದ್ಧಿಯನ್ನು ಪಡೆಯುತ್ತ ಬರುವಲ್ಲಿ ಈಗ ಉಭಯಲೋಕ ಸುಖಸಾಧನಾರ್ಥವಾಗಿ ಪ್ರವರ್ತಿಸಿ ತನ್ನ ಯೋಗ್ಯತಾಕರ್ಮಾನುಸಾರವಾಗಿ ಬಡವನೋ ಭಾಗ್ಯವಂತನೋ ಆಗಿರುತ್ತಾನೆ. ಈ ಬಡತನ ಭಾಗ್ಯಗಳು, ಈ ದುಃಖಸುಖಗಳು, ಶೀತೋಷ್ಣ ಕಾಲ

ಚಕ್ರದ ಪರಿವರ್ತನದಂತೆ ಪರ್ಯಾಯವಾಗಿ ಬರುತ್ತ ಹೋಗುತ್ತ ಸುತ್ತುತ್ತಿರುವುದೇ ಹೊರತು ಎಲ್ಲಿಯು ಯಾವಾಗಲು ಯಾರಲ್ಲಿಯೂ ಸ್ಥಿರವಾಗಿ ನಿಲ್ಲುವುದೇ ಅಲ್ಲವೆಂಬ ಸಿದ್ಧಾಂತವನ್ನು ಯಾರೂ ಮರೆಯಬಾರದು.

ಮತ್ತು ಈ ಭಾಗ್ಯ ಬಡತನಗಳೆರಡೂ ಸಾಮಾನ್ಯವಾಗಿ ನೋಡಿದರೆ ಪರಸ್ಪರ ವಿರುದ್ಧಗಳೆಂದು ತೋರಿಬಂದರೆ ದೇವರ ಕಟ್ಟಳೆಯಲ್ಲಿ ಮಾತ್ರ ಈ ಲೋಕಾಭಿವೃದ್ಧಿಗಾಗಿ ಅನ್ಯೋನ್ಯ ಸಾಹಾಯ್ಯಕಾರಿಗಳಾಗಿಯೇ ಏರ್ಪಟ್ಟಿವೆಯೆಂದು ತಿಳಿಯಬರುತ್ತಿದೆ. ಭಾಗ್ಯವಂತನು ತನ್ನ ಪ್ರಯಾಣಕಾಲದಲ್ಲಿ ಒಂದು ಲೇಶಾಂಶವನ್ನೂ ಒಡನೆ ಕೊಂಡುಹೋಗುವನಲ್ಲ. ಇಲ್ಲಿರುವಾಗಲೂ ಎಲ್ಲವನ್ನೂ ತಾನೊಬ್ಬನೇ ನುಂಗಿ ಮಾಯೆ ಮಾಡಿಬಿಡುವನೂ ಅಲ್ಲ. ಇನ್ನು ಅನುಭವಿಸುವನೆಂದರೆ ತನಗಿರುವ ಅಲ್ಪಕಾಲದಲ್ಲಿ ಅಧಿಕವಾಗಿರುವ ವಸ್ತುಗಳನ್ನು ಎಷ್ಟನ್ನು ಹೇಗೆತಾನೇ ಅನುಭವಿಸಲು ಶಕ್ಯವಾದೀತು ?

ಮೊತ್ತಮೊದಲು ತಾನು ಯಾರು ? ತನ್ನ ದೇಹಯಾತ್ರೆಗೆಲ್ಲಾ ಆವಶ್ಯಕವಾದುದು ಎಷ್ಟು ? ಎಂಬ ವಿಚಾರವನ್ನು ವಿವೇಕಿಯು ಮೊದಲು ತನ್ನ ಮನದಲ್ಲಿ ನಿಶ್ಚಯಿಸಿಕೊಳ್ಳಬೇಕು. ಬಳಿಕ ಇದು ಸ್ವಾರ್ಥವಾಯಿತು, ಇದು ಪರಾರ್ಥವಾಯಿತು ಎಂದು ವಿವೇಕಿಸಿಕೊಳ್ಳಬೇಕು.

ಶ್ಲೋ॥ “ ಗೋಶತಾದಪಿ ಗೋಃ ಕ್ಷೀರಂ ಪ್ರಸ್ಥಂ ಧಾನ್ಯಶತಾದಪಿ ।
ಪ್ರಾಸಾದೇಭ್ಯೋಽಪಿ ಖಟ್ವಾರ್ಧಂ ಶೇಷಾಃ ಪರವಿಭೂತಯಃ ॥ ”

(ಒಂದು ನೂರು ಹಸುಗಳು ಹಾಲು ಕರೆಯುತ್ತಿದ್ದರು ಭಾಗ್ಯವಂತನು ಒಂದು ಹಸುವಿನ ಹಾಲನ್ನು ; ನೂರು ಖಂಡುಗದಷ್ಟು ಅಕ್ಕಿಯಿದ್ದರು ಅದರಲ್ಲಿ ಒಂದು ಪಾವಿನಷ್ಟನ್ನು ; ಮಾತ್ರವೇ ಉಣ್ಣುವನು. ಉಪ್ಪರಿಗೆಗಳು ಅನೇಕಗಳಿದ್ದರೂ ಯಾವುದೋ ಒಂದುಪ್ಪರಿಗೆಯಲ್ಲಿಯು ಒಂದು ಮಂಚದ ಅರ್ಧಭಾಗದಲ್ಲಿ ಮಾತ್ರವೇ ಮಲಗುವನು. ಎಂದ ಮೇಲೆ ಇನ್ನು ಉಳಿದ ಸಂಪತ್ತೆಲ್ಲವು ಹೆಂಡಿರು ಮಕ್ಕಳು ಮುಂತಾದ ಇತರ ಪರಿವಾರದ ಮತ್ತು ಅನೇಕರಾದ ಬಡವರಾದವರುಗಳ ಅನುಭವಾರ್ಥವಾದುದೇ ಅಲ್ಲವೆ ? )

ಹೀಗೆ ಸ್ವಾರ್ಥಪರಾರ್ಥಭಾಗಗಳನ್ನು ಚಿತ್ತದಲ್ಲಿ ವಿವೇಚನೆ ಮಾಡಿಕೊಳ್ಳುತ್ತ ಬರುವ ಅಭ್ಯಾಸವುಳ್ಳ ವಿದ್ವಾಂಸಗೆ ವಿಶೇಷ ಸುಖವು ಹೆಚ್ಚುತ್ತ ಬರುವುದು. ಅದಂತಿರಲಿ. ಪ್ರಕೃತದಲ್ಲಿ ‘ ಮನೆಯಬಾಗಿಲಲ್ಲಿ ಹೊಟ್ಟೆಬಟ್ಟೆಗಿಲ್ಲ ’ ಎಂಬ ಬಡವರೊಳಗೆ ಯಾವನೊಬ್ಬನಾದರೂ ಪ್ರತಿದಿನವು ತನ್ನ ಕರ್ಮಾನುಸಾರವಾಗಿ ಆಹಾರವಿದ್ಯಾದಿಗ

ಳನ್ನು ಪಡೆಯುತ್ತಿರುವನೇ ಹೊರತು ಈ ದಿನ ಹೊಟ್ಟೆಗೆ ಯಾವುದೊಂದು ಕಾಳು ಕಡಿ ಗಡ್ಡೆ ಗೆಣಸು ಗಿಂಜಿ ಅಂಬಲಿ ಮುಂತಾದ ಆಹಾರವೇ ಇಲ್ಲದೆ ಕ್ಷುತ್ತಿನಿಂದಲೇ ಸತ್ತನೆಂಬುದು ಎಲ್ಲಿಯೂ ಕಾಣಬರಲಿಲ್ಲವಲ್ಲ ? ಮತ್ತು ಅತ್ಯಶನದಿಂದುಂಟಾದ ಅಜೀರ್ಣದೋಷದಿಂದ ಪ್ರಾಪ್ತವಾದ ರೋಗಗಳಿಂದಲೇ ಮೃತ್ಯುವಶನಾಗುವನು. ಆದರೆ ಆ ಬಡವನು ತಿನ್ನುವುದು ಕದನ್ನವು-ಮಿಷ್ಟಾನ್ನವಲ್ಲ, ಹೊದೆಯುವುದು ಕಂಬಳಿ ದುಪ್ಪಟಿ ಮುಂತಾದ ಒರಟುಬಟ್ಟೆ-ಚೀನಾಂಬರಾದಿಗಳಲ್ಲ, ಮಲಗುವುದು ನೆಲದ ಮೇಲೆ-ಉಪ್ಪರಿಗೆ ಮಂಚಗಳಲ್ಲ, ವಾಸಮಾಡುವುದು ಹುಲ್ಲುಮನೆ ಮಣ್ಣುಮನೆಗಳು-ಕಲ್ಲು ಕಬ್ಬಿಣ ಮನೆಗಳಲ್ಲ. ಇವೆಲ್ಲವು ದುಃಖಕರಗಳೆನ್ನಬಹುದು. ಹೀಗೆನ್ನುವನು ಇದಕ್ಕೆ ಮೇಲ್ಪಟ್ಟಂತಹ ಸುಖಗಳನ್ನನುಭವಿಸುತ್ತಿದ್ದು, ಆಕಸ್ಮಿಕವಾಗಿ ಅದು ತಪ್ಪಲು ಅರಣ್ಯಕ್ಕೆ ಬಂದವನಾಗಿರಬೇಕಲ್ಲದೆ, ಎಳೆತನದಿಂದ ಅಭ್ಯಾಸವಾಗಿದ್ದವಗೆ ಅವೆಲ್ಲವೂ ಕಷ್ಟವಾಗಿ ತೋರುವುದೆ ? ಅಥವಾ ಯಾವನಿಗೆ ಆಗಲಿ ಅಭ್ಯಸ್ತವಾಗಿದ್ದುದು ತಪ್ಪಿದೊಡನೆ ಒಂದೆರಡು ದಿನ ಶ್ರಮವಾಗಿದ್ದರೂ ಮಲಗಿ ನಿದ್ರಿಸುವಾಗ ಇದು ಗಿಡದ ಬುಡ, ಬಂಡೆ, ನೆಲ, ಇದು ಉಪ್ಪರಿಗೆ, ಹಂಸತೂಲತಲ್ಪ, ಎಂಬ ಭೇದವು ತೋರುವುದೊ ? ಕ್ಷುತ್ತಿನ ಕಾಲದಲ್ಲಿ ಆಹಾರವನ್ನು ತೆಗೆದುಕೊಳ್ಳುವಾಗ ರುಚಿಯಿಲ್ಲದೆ ನೀರಸವಾದ ಹುಲ್ಲು ನೆಲ್ಲು ಹೊಟ್ಟು ಮುಳ್ಳು ಕಲ್ಲುಗಳನ್ನು ನಾಲಿಗೆಯು ಒಳಕೊಂಡಿತೋ ? ಇಲ್ಲವೇ ಅವನು ತಿಂದ ಹಿಟ್ಟು ಅಂಬಲಿ ಮುಂತಾದ ಕದನ್ನದಿಂದ ಪ್ರಾಣಾಪಾನಾದಿ ಕಾರ್ಯಗಳೇನಾದರೂ ಒಳಗೆ ನಡೆಯದೆಯೇ ತೆಗೆದುಕೊಂಡ ಆಹಾರವು ರಕ್ತಮಾಂಸಾದಿ ಧಾತುಗಳಾಗಿ ಏರ್ಪಡದೆಯೇ ಹೋಯಿತೆ ? ಇನ್ನೇನಾಯ್ತು ? "ನಾನು ಇಂತಹ ಉತ್ತಮಾಧಿಕಾರಕ್ಕೆ ಬಂದು ಇಷ್ಟು ಧನಿಕನಾಗಿಯು ಬಡವನಂತೆ ಹೀನಸ್ಥಿತಿಯ ಅನ್ನವಸ್ತ್ರಗಳಿಂದ ಬದುಕಬೇಕೆ ? ನನ್ನ ಮಾನವು ನಷ್ಟರದಲ್ಲವೆ ?" ಎಂಬ ಚಿತ್ತೌನ್ನತ್ಯಕ್ಕೆ ಒಳಗಾಗಿ ಅದು ನಡೆಯುವಾಗ ಆ ಮನಸ್ಸಿನ ಕೊರತೆಯೊಂದೇ ಅವಗೆ ದುಃಖಾಸ್ಪದವಾಗುವುದು. ಅಷ್ಟೇ ಹೊರತು ಅನ್ನವಸ್ತ್ರಾದಿಗಳು ದುಃಖಕಾರಣಗಳಲ್ಲ. ಆದರಿಂದ ಬಡವನಿಗೇ ಆಗಲಿ ಭಾಗ್ಯವಂತನಿಗೇ ಆಗಲಿ ಅವನವನ ಮನಸ್ತೃಪ್ತಿಯೇ ಅವನವನಿಗೆ ಸುಖವು. ಮನದ ಕೊರತೆಯೇ ದುಃಖವು. ಈ ಯಶನವಸನಗಳಾಗಲಿ, ಈ ದೇಶಕಾಲ ವಸ್ತುವಾಹನಾದಿಗಳಾಗಲಿ, ದಾರಪುತ್ರಾದಿ ಪರಿವಾರವಾಗಲಿ, ಇನ್ನೂ ದೇವಾಸುರಾದಿಗಳೇ ಆಗಲಿ, ನೆಪಕ್ಕೆ ಗುರಿಯಾಗುವರೇ ಹೊರತು ಸುಖದುಃಖಗಳನ್ನುಂಟುಮಾಡತಕ್ಕವರೊಬ್ಬರೂ ಅಲ್ಲವೆಂಬುದೇ ಸಿದ್ಧಾಂತವು.

ಶ್ಲೋ॥ "ನಾಯಂ ಜನೋ ಮೇ ಸುಖದುಃಖಹೇತುಃ।
ನದೇವತಾತ್ಮ ಗ್ರಹಕರ್ಮಕಾಲಾಃ॥
ಮನಃ ಪರಂ ಕಾರಣ ಮಾಮನನ್ತಿ।
ಸಂಸಾರಚಕ್ರಂ ಪರಿವರ್ತಯೇದ್ಯತ್॥"

(ಈ ಜನರು ದೇವತೆಗಳು ಈಶ್ವರನು ಗ್ರಹಗಳು ಕರ್ಮಕಾಲ ಇವೊಂದೂ ಸುಖದುಃಖಕಾರಣವಲ್ಲ. ಯಾವುದು ಜನನ ಮರಣ ಚಕ್ರವನ್ನು ಸುತ್ತಿಸುತ್ತಿದೆಯೋ ಆ ಮನಸ್ಸೊಂದೇ ಸುಖದುಃಖಗಳಿಗೆ ಮುಖ್ಯಕಾರಣವೆಂದು ದೊಡ್ಡವರು ತಿಳಿದಿದ್ದಾರೆ) ಎಂದು ಭಾಗವತ ಭಿಕ್ಷುಗೀತೆಯಲ್ಲಿ ಉಕ್ತವಾಗಿರುವ ಮೇರೆಗೆ ನಾನು ಬಡವ ನಾನು ಭಾಗ್ಯವಂತ ಎಂದು ಅವನವನು ಮನದಲ್ಲಿ ಮಾಡಿಕೊಂಡಿರುವ ಮನೋಧರ್ಮವೇ ಅವನವನ ಸುಖದುಃಖಗಳಿಗೆ ಕಾರಣವೆಂದು ನಿಶ್ಚಯಿಸಿಕೊಂಡು ಬುದ್ಧಿಶಾಲಿಯಾಗಿ ಅಸ್ಥಿರವು ಕ್ಷಣಿಕವು ಕ್ಷುದ್ರವು ಆದ ಈ ಭಾಗ್ಯ ಬಡತನಗಳಿಂದಾಗುವ ಕೇವಲೈಹಿಕ ಸುಖದುಃಖಗಳನ್ನು ನೆಚ್ಚದೆ ಶಾಸ್ತ್ರಾನುಸಾರವಾದ ಸದ್ಬುದ್ಧಿಯಿಂದ ಆ ಮನಸ್ಸನ್ನು ದಿನದಿನಕ್ಕೆ ತಿದ್ದಿಕೊಳ್ಳುತ್ತ ಬರಬೇಕು.

"ಸರ್ವಸ್ಯ ದ್ವೇ ಸುಮತಿ ಕುಮತೀ ಸಮ್ಪದಾಪತ್ತಿಹೇತೂ"

ಎಂದು ಹೇಳಿದಂತೆ ನಮ್ಮನ್ನು ಸನ್ಮಾರ್ಗದಲ್ಲಿ ತಂದುಬಿಡುವ ಸದ್ಬುದ್ಧಿಯೇ ಸರ್ವಸುಖಸಂಪತ್ತಿಗೆ ಹೇತು, ದುರ್ಮಾರ್ಗದುಸ್ಸಹವಾಸದಲ್ಲಿ ಪ್ರವೃತ್ತಿಗೊಳಿಸುವ ದುರ್ಬುದ್ಧಿಯೇ ಸರ್ವದುಃಖದ ವಿಪತ್ತಿಗಾಕರವಾದ ಬಡತನದ ಕ್ಲೇಶಕ್ಕೆ ಹೇತುವೆಂದು ತಿಳಿಯಬೇಕು. ಈ ಸಿದ್ಧಾಂತದ ಸದ್ವಿವೇಕವೇ ಮನುಜರಿಗೆ ಮಿತ್ರವು. ಇದನ್ನರಿಯದ ಪಾಮರರ ದುರಾಸೆಯು ಮೌಢ್ಯವೇ ಸಹಜಶತ್ರುವು.

ಶ್ಲೋ॥ "ನಾಸ್ತಿ ಶತ್ರುರ್ನ ದ್ವಿತೀಯೋಽಸ್ತಿ ಶತ್ರುರಜ್ಞಾನ ತುಲ್ಯಃ ಪುರುಷಸ್ಯ ರಾಜನ್।
ಯೇನಾವೃತಃ ಕುರುತೇ ಸಂಪ್ರಯುಕ್ತೋ ಘೋರಾಣಿ ಕರ್ಮಾಣಿ ಸುದಾರುಣಾನಿ॥"

(ಮನುಷ್ಯಗೆ ಅಜ್ಞಾನಕ್ಕೆ ಸಮಾನವಾದ ಶತ್ರು ಬೇರೆ ಯಾವನೊಬ್ಬನೂ ಇಲ್ಲ. ಹೇಗೆಂದರೆ-ಆ ಮೋಹಾಜ್ಞಾನಗಳಿಗೆ ಮನಸ್ಸು ಒಳಗಾದಾಗಲೇ ಜನರು ಅತಿ ಕ್ರೂರವಾದ ಭಯಂಕರ ಕರ್ಮಗಳನ್ನು ಮಾಡುತ್ತಾರೆ.) ಆದುದರಿಂದ ಸಹಜಶತ್ರುವಾದ ಮೌಢ್ಯವನ್ನು ಸದಸದ್ವಿಮರ್ಶನದಿಂದ ತೊಲಗಿಸಿಕೊಂಡು "ಪ್ರಾಪ್ತಂ ಪ್ರಾಪ್ತ ಮುಪಾಸೀತ ಹೃದಯೇನಾಪರಾಜಿತಃ" ಎಂದು ಸರ್ವಸ್ವಾಮಿಯಾದ ಭಗವಂತನ ಇಚ್ಛಾನುಸಾರವಾಗಿ ಕಟ್ಟಳೆಗೊಂಡಿರುವ ಈ ನೀಚೋಚ್ಚ ಜಗದ್ವ್ಯಾಪಾರಗ

ಳಲ್ಲಿ ನಮ್ಮ ಯೋಗ್ಯತಾಕರ್ಮಗಳಿಗೆ ಅನುಸಾರವಾಗಿ ಎಲ್ಲಿ ಎಷ್ಟು ಹೇಗೆ ಯಾವುದು ಬಂದೊದಗುವುದೋ ಅದೆಲ್ಲವನ್ನೂ ದೇವರು ಕೊಟ್ಟುದೆಂದು ಭಾವಿಸಿಕೊಂಡು ಸ್ವಪೌರುಷಾಹಂಕಾರವನ್ನು ಬಿಟ್ಟು ಸದಾಸಂತೋಷದೊಡನೆ ಸ್ವೀಕರಿಸುತ್ತ ಚಂಚಲವಾದೀ ಮನಸ್ಸನ್ನು ವಶದಲ್ಲಿರಿಸಿಕೊಳ್ಳುವ ಅಭ್ಯಾಸಮಾಡುತ್ತ ಬರಬೇಕು.

ಶ್ಲೋ|| " ಸಂತೋಷಂ ಪರಮಾಸ್ಥಾಯ ಸುಖಾರ್ಥೀ ಸಂಯತೋ ಭವೇತ್ ||
ಸಂತೋಷಮೂಲಂ ಹಿ ಸುಖಂ ದುಃಖಮೂಲಂ ವಿಪರ್ಯಯಃ || ", ಮನು ೪-೧೨.

'ನಾನು ಬಡವ ದುಃಖಿ' ಎಂದು ತನ್ನನ್ನು ತಾನು ದೂಷಿಸಿಕೊಳ್ಳದೆ ಇಂದ್ರಿಯಗಳಿಗೆ ವಿಷಯಾಸಕ್ತಿಯನ್ನು ಹೆಚ್ಚಿಸದೆ ವಶದಲ್ಲಿರಿಸಿಕೊಂಡು ಸದಾ ಸಂತೋಷಾಭ್ಯಾಸದವನಾಗಬೇಕು. ತನಗೆ ಲಭ್ಯವಲ್ಲದ ಸುಖಕ್ಕಾಸೆಪಡದೆ ಸ್ವಧರ್ಮಕರ್ಮಗಳಲ್ಲಿ ಸಿರತನಾದವನೇ ಭಾಗ್ಯವಂತನು. ಅವನೇ ಸುಖಿಯಾಗುವನು. ಈ ವಿಷಯದಲ್ಲಿ ಹೇಳಿರುವ ಕೆಲವು ಮನುವಚನಗಳನ್ನು ಸ್ಮರಿಸುತ್ತಿರುವುದುತ್ತಮವು.

" ಯದ್ಯತ್ಪರವಶಂ ಕರ್ಮ ತತ್ತದ್ಯತ್ನೇನ ವರ್ಜಯೇತ್ |
ಯದ್ಯದಾತ್ಮವಶಂತುಸ್ಯಾತ್ ತತ್ತತ್ಸೇವೇತ ಯತ್ನತಃ || ೪-೧೫೯ ||
ಸರ್ವಂ ಪರವಶಂ ದುಃಖಂ ಸರ್ವಮಾತ್ಮ ವಶಂ ಸುಖಮ್ |
ಏತದ್ವಿದ್ಯಾತ್ಸಮಾಸೇನ ಲಕ್ಷಣಂ ಸುಖದುಃಖಯೋಃ || ೪-೧೬೦ ||
ಯತ್ಕರ್ಮಕುರ್ವತೋಽಸ್ಯ ಸ್ಯಾತ್ ಪರಿತೋಷೋಽನ್ತರಾತ್ಮನಃ |
ತತ್ಪ್ರಯತ್ನೇನ ಕುರ್ವೀತ ವಿಪರೀತಂತು ವರ್ಜಯೇತ್ || " ೪-೧೬೧ ||

(ಆವುದಾವುದು ಪರಾಧೀನಕಾರ್ಯವೋ ಅದನ್ನು ಬಿಡಬೇಕು. ಆವುದು ಸ್ವಾಧೀನವೋ ಅದನ್ನು ಸೇವಿಸಬೇಕು. ಪಾರತಂತ್ರ್ಯವೇ ದುಃಖವು, ಸ್ವಾತಂತ್ರ್ಯವೇ ಸುಖವು. ಅಂತರಾತ್ಮಪ್ರೀತಿಕರವಾದ ಕರ್ಮಗಳನ್ನು ಶ್ರಮಪಟ್ಟಾದರೂ ಸಾಧಿಸಬೇಕು; ಆತ್ಮಗೆ ದುರ್ಗತಿದಾಯಕವಾದ-ಪಾನಾದಿನಿಷಿದ್ಧ-ಕರ್ಮವನ್ನು ಬಿಟ್ಟೇಬಿಡಬೇಕು.) ಹೀಗೆ ಮನೂಕ್ತಿಯಿರುವುದರಿಂದ ಸರ್ವಕರ್ಮಗಳಲ್ಲಿಯೂ ಬಡವನಾಗಲಿ ಭಾಗ್ಯವಂತನಾಗಲಿ ಈ ವಚನಾರ್ಥಗಳನ್ನು ಆಚರಣೆಯಲ್ಲಿರಿಸಿಕೊಳ್ಳಬೇಕು. ಉತ್ತಮ ಸುಖಾಪೇಕ್ಷೆಯುಳ್ಳ ಮಾನವನು ಯಾವಾಗಲು ಮನದಲ್ಲಿ ಉತ್ತಮ ಸಂತೋಷ (ತೃಪ್ತಿ) ವನ್ನು ಧರಿಸಿಟ್ಟುಕೊಂಡವನಾಗಿ ಇಂದ್ರಿಯಗಳನ್ನು ವಿಷಯಗಳಲ್ಲಿ ಅಧಿಕವಾಗಿ ಪ್ರವೃತ್ತಿಗೊಳಿಸದೆ ಬಿಗಿದು ಹಿಡಿಯುವನಾಗಿರಬೇಕು. ಏಕೆಂದರೆ—" ಸುಖವೆಂಬುದೆಲ್ಲವು ಸಂತೃಪ್ತಿಮೂಲವು, ದುಃಖವಾದರೋ ಅದಕ್ಕೆ ವಿರುದ್ಧವಾದ ಅತೃ

ಪ್ತಿಯೇ ಮೂಲವಾಗುಳ್ಳದು ” ಎಂಬ ಸಿದ್ಧಾಂತವನ್ನು ಸದಾ ಮನದಲ್ಲಿ ಧಾರಣ ಮಾಡಿಕೊಂಡು—

“ ತೇನ ತ್ಯಕ್ತೇನ ಭುಂಜೀಥಾಃ ಮಾಗೃಧಃ ಕಸ್ಯಸ್ವಿದ್ಧನಮ್ |
ಈಶಾವಸ್ಯಷ್ಟಂ ಹ್ಯವರುಧ್ಯಹೇಂಗ | ದುಃಖಂ ಸುಖಂ ವಾ ಗುಣಕರ್ಮ ಸಂಗಾತ್ ||
ಆಸ್ಥಾಯ ತತ್ತದ್ಯದಯುಕ್ತನಾಥಃ | ಚಕ್ಷುಷ್ಮತಾಂಧಾ ಇವ ನೀಯಮಾನಾಃ || ”

(ಸರ್ವೇಶ್ವರನಾದ ಆ ಸ್ವಾಮಿಯಿಂದ ದತ್ತವಾಗಿರುವುದನ್ನೇ ಎಲ್ಲರೂ ಅನುಭವಿಸಬೇಕು. ಪರಧನವನ್ನು ಆಶಿಸಬಾರದು) ; ನಮ್ಮ ಗುಣಕರ್ಮಗಳಿಗೆ ತಕ್ಕಂತೆ ದೇವರುಕೊಟ್ಟುದನ್ನು ಸಂತೋಷದಿಂದ ಪಡೆದುಕೊಂಡು ನಾವು ಸುಖವನ್ನೋ ದುಃಖವನ್ನೋ ಅನುಭವಿಸಬೇಕು. ಕುರುಡರು ಕಣ್ಣಿದ್ದವರಂ ಹಿಂಬಾಲಿಸಿ ಹೋಗುವಂತೆಯೇ ನಾವೆತ್ತೆತ್ತಲೂ ದೇವರು ತೋರಿಸಿದಂತಹ ದಾರಿಯ್ಯಲ್ಲಿಯೇ ಹೋಗತಕ್ಕವರಾಗಬೇಕು.

ಎಂದು ಮಹರ್ಷಿಗಳು ಹೇಳಿರುವುದರಿಂದ ಇಂದ್ರಿಯ, ವಿಷಯ, ಇವುಗಳಿಗೆ ಸಂಬಂಧಿಸಿರುವ ಲೌಕಿಕವಾದ ಸುಖದುಃಖಗಳೆಲ್ಲವು ಮನುಷ್ಯಗೆ ತಾತ್ಕಾಲಿಕಗಳಲ್ಲದೆ ಜೀವಾತ್ಮನ ಸ್ವರೂಪಕ್ಕೆ ಸೇರಿದಂತಹವು ಅಲ್ಲ. ಈ ಜೀವನ ಜನ್ಮಾಂತರದ ದೇಹಕ್ಕೆ ಕೂಡ ಸಂಬಂಧಿಸುವುದಲ್ಲ. ಆದರೆ “ ಸರ್ವಸುಖದುಃಖವೂ ಈ ವಸ್ತುವಾಹನಾದಿ ಲೌಕಿಕ ಪದಾರ್ಥಕ್ಕೆ ಮಾತ್ರವೇ ಸಂಬಂಧಿಸಿದೆಯೆಂಬುವ ” ಎಂದರೆ ಜಡವಾದ ಪದಾರ್ಥಕ್ಕೆ ಸುಖದುಃಖಕರ್ತೃತ್ವವೆಲ್ಲಿಯದು ? ಅದಕ್ಕೂ ಒಂದು ವೇಳೆ ಬದುಕಿಸುವ ಕೊಲ್ಲುವ ಶಕ್ತಿಯುಂಟಾಗಿರುವುದೆನ್ನಬಹುದಾದರೂ ಆ ಶಕ್ತಿಯು ಕಾಲದೇಶಾವಸ್ಥಾದಿ ಭೇದದಿಂದ ಒಬ್ಬನಿಗೆ ದುಃಖಕರವಾದುದು ಮತ್ತೊಬ್ಬಗೆ ಸುಖಕರವಾಗಿರುವುದು ಕೂಡ ಕಾಣಬರುತ್ತಿಯಲ್ಲವೆ ? ತತ್ಕ್ಷಣದಲ್ಲಿ ಮೃತ್ಯುಪದವಾದ ಅಗ್ನಿವಿಷಶಸ್ತ್ರಾದಿಗಳು ಕೂಡ ಜೀವನದ ಜಿಹಾಸೆಯಲ್ಲಿರುವವರಿಗೆ ಸುಖಪ್ರದವಾಗಿದೆ. ಎಲ್ಲರಿಗೂ ಸಹಜಸುಖಕರಗಳಾದ, ಬ್ಧದುಕಿಸತಕ್ಕಂತಹ, ಅನ್ನಪಾನಾದಿಗಳು ಕೂಡ ವ್ಯಾಧಿಗ್ರಸ್ತರಿಗೂ ವ್ಯಸನಿಗಳಿಗೂ ವಿಷಪ್ರಾಯವಾಗಿ ಮರಣದುಃಖವನ್ನುಂಟುಮಾಡುತ್ತಿವೆಯಷ್ಟೆ ? ಕಣ್ಣೋವಿನವಗೆ ಬೆಳಕೇ ದುಃಖವು, ಚಿತ್ರಗಾರಗೆ ಆ ಬೆಳಕೇ ಸುಖವು. ಹೀಗಿರುವುದರಿಂದ ಈ ಸುಖದುಃಖಸಾಧನಗಳಲ್ಲಿ ಸುಖದುಃಖಕರ್ತೃತ್ವವು ಅಧಿಕಾರಿಭೇದದಿಂದ ಔಪಚಾರಿಕವಾಗಿದೆಯಲ್ಲದೆ ವಾಸ್ತವವಲ್ಲವು.

ತತ್ಕ್ಷಣದಲ್ಲಿ ಪ್ರತ್ಯಕ್ಷಫಲವನ್ನು ತೋರಿಸತಕ್ಕಂತಹ ಅಮೃತಾನ್ನ ವಿಷಶಸ್ತ್ರಮುಂತಾದವುಗಳ ನಿಜಸ್ಥಿತಿಯೇ ಹೀಗಿರುವಾಗ ಒಂದು (ನಿಲುಕಡೆ) ವ್ಯವಸ್ಥೆಯೇ

ಇಲ್ಲದೆ ತತ್ತದ್ಭಾವನಾಬಲದಿಂದಿರುವ ಈ ಭಾಗ್ಯಬಡತನಗಳ ಸುಖದುಃಖಸ್ಥಿತಿಯು ಅವನವನ ಬುದ್ಧಿಕಲ್ಪಿತವಲ್ಲದೆ ವಾಸ್ತವವಾಗುವುದೆ? ಭಾಗ್ಯಬಡತನಗಳ ಜೀವಾಳಗಳನ್ನು ನೋಡಿರಿ. ಅದೆಂತೆಂದರೆ:—

ಶ್ಲೋ|| "ಅಧೋಽಧಃಪಶ್ಯತಃ ಕಸ್ಯ ಮಹಿಮಾ ನೋಪಚೀಯತೆ? |
ಉಪರ್ಯುಪರಿ ಪಶ್ಯಂತಃ ಸರ್ವ ಏವ ದರಿದ್ರತಿ ||"

(ತನಗೆ ಕೀಳ್ಪಟ್ಟ ಸ್ಥಿತಿಯಲ್ಲಿರುವವರನ್ನೇ ನೋಡುತ್ತ ಬಂದರೆ ತನ್ನ ಭಾಗ್ಯಸ್ಥಿತಿಯೇ ಉತ್ಕೃಷ್ಟಭಾಗ್ಯಸ್ಥಿತಿಯೆಂದೂ ತನಗೆ ಮೇಲ್ಪಟ್ಟವರನ್ನೇ ನೋಡುತ್ತ ಬಂದರೆ ನಾವೆಲ್ಲರೂ ದರಿದ್ರರೇ, ತನ್ನ ಸ್ಥಿತಿಯು ಬಲು ಬಡತನದ ಸ್ಥಿತಿಯೆಂದೂ ತೋರಿಬರುವುದು ಸಹಜವು.) ಆದರೆ ಈಗ ನಾವು ಹೇಗೆ ಭಾವಿಸಿಕೊಳ್ಳಬೇಕೆಂದರೆ:— "ಧನಿಭ್ಯೋಽಧನಿನಃಸಂತಿ" ಲೋಕದಲ್ಲಿ ಯಾರನ್ನು ನಾವು ಧನಿಕರೆನ್ನುವೆವೋ ಅವರಿಂದಧಿಕರಾದ ಧನಿಕರೂ ಇರುವರು. ಯಾರನ್ನು ಬಲು ಬಡವರೆನ್ನುವೆವೋ ಅದರಿಂದಧಿಕರಾದ ಕಡುಬಡವರೂ ಇರುವರು. ಆದಕಾರಣದಿಂದ ಈಗ

"ದುಃಖೀ ದುಃಖಾಧಿಕಾನ್ ಪಶ್ಯೇತ್ ಸುಖೀಪಶ್ಯೇತ್ಸುಖಾಧಿಕಾನ್ ||"

ಎಂದು ನಮ್ಮ ಮನಕ್ಕೆ ದುಃಖವಾದಾಗ ತಗ್ಗದೆ ನಮಗಿಂತಲೂ ಹೆಚ್ಚು ದುಃಖಪಡುವವರನ್ನು ಕಂಡು ನಮ್ಮ ದುಃಖವು ಅಲ್ಪವೆಂದು ಅದನ್ನು ಮರೆತುಬಿಡಬೇಕು. ಸುಖವಾದಾಗ ಬಲು ಹಿಗ್ಗಿದೆ ನಮಗಿಂತಲು ಅಧಿಕಸುಖದಲ್ಲಿರುವವರನ್ನು ಕಂಡು ನಮ್ಮ ಸುಖವು ಅಲ್ಪವು ಅಶಾಶ್ವತವೆಂದು ಅಹಂಕಾರಮದಗಳನ್ನು ಬಿಟ್ಟಿರಬೇಕೆಂದು ಶಾಸ್ತ್ರಗಳು ಸಾರುತ್ತಿವೆ.

ಅದರಿಂದ ಭಾಗ್ಯ ಬಡತನಗಳ ಫಲಗಳಾದ ಸುಖದುಃಖಗಳೆಲ್ಲವು ಅವನವನ ಭಾವನಾನುಗುಣವಾಗಿ ಅವನವನ ಅಂತಃಕರಣಕ್ಕೆ ಮಾತ್ರವೇ ತೋರಿಬರುವುದಲ್ಲದೆ ವಸ್ತುಗತವಲ್ಲದುದರಿಂದ ವಾಸ್ತವವಲ್ಲವು. ಎಂತಹವನಿಗೂ ಮನಸ್ಸು ಉಲ್ಲಾಸದಿಂದ ತೃಪ್ತಿಪಟ್ಟಿದ್ದಾಗ ಸರ್ವವು ಸುಖಮಯವಾಗಿಯೇ ಕಾಣಬರುವುದು. ಅವನಿಗೇ ಆ ಮನಸ್ಸು ಕಾರಣಾಂತರದಿಂದ ಕಲುಷಿತವಾಗಿ ಕಾಮಲೋಭಾದಿಗಳಿಂದಲೋ ಅಸೂಯಾಕೋಪಾದಿಗಳಿಂದಲೋ ಕೆಟ್ಟು ಅತೃಪ್ತಿ, ವ್ಯಸನ, ವಿಷಾದಾಕ್ರಾಂತವಾಗಿದ್ದಾಗ ಎಂದರೆ ಆಧಿವ್ಯಾಧಿಗ್ರಸ್ತನಾದಾಗ ಎಲ್ಲವು ದುಃಖಮಯವಾಗಿಯೇ ಕಾಣಬರುವುದು. ಅದರಿಂದ ಮನಸ್ತೃಪ್ತಿಯೇ ಸುಖವು. ಅದೇ ಸ್ವರ್ಗವು. ಆ ಮನಸ್ಸಿನ ಅತೃಪ್ತಿಯೇ ಕೊರತೆಯೇ ದುಃಖವು. ಅದೇ ನರಕವು. ಶುದ್ಧಸಾತ್ತ್ವಿಕರು

ಣಾಧಿಕಗಳಾದ ಸ್ವರ್ಗಾದಿಲೋಕಗಳೆಲ್ಲವು ಮೇಲೆಯೂ, ಶುದ್ಧತಮೋಗುಣಾಧಿಕ ನರಕಾದಿಲೋಕಗಳೆಲ್ಲವೂ ಕೆಳಗೂ, ವ್ಯವಸ್ಥಿತವಾಗಿವೆಯಷ್ಟೆ. ಆ ಊರ್ಧ್ವಾಧೋಲೋಕಗಳು ಈ ಸ್ಥೂಲಶರೀರದಿಂದ ಗಮ್ಯಗಳಲ್ಲವು. ಅವು ಸೂಕ್ಷ್ಮಶರೀರಕ್ಕೆ ಮಾತ್ರವೇ ವಿಷಯಗಳು. ಅದರಿಂದದಂತಿರಲಿ. ಈಗ ನಾವು ವಾಸಮಾಡುತ್ತಿರುವ ಈ ಭೂಲೋಕವು ಅವೆರಡರ ನಡುವೆ ರಜೋಗುಣಾಧಿಕವಾಗಿಯು ತಮಸ್ಸತ್ತ್ವಸಂಮಿಶ್ರವಾಗಿಯು ಇರುವುದರಿಂದಲೇ ಎಲ್ಲಾ ಭಾಗದಲ್ಲಿಯು ಎಲ್ಲಾ ಕಾಲದಲ್ಲಿಯು ಎಲ್ಲಾ ವಿಷಯಗಳಲ್ಲಿಯು ಸರ್ವವು ಸುಖದುಃಖಸಂಮಿಶ್ರವಾಗಿಯೇ ಇರಬೇಕಾದುದು ಸ್ವಾಭಾವಿಕವಾಗಿರುವುದರಿಂದ ಸಂತುಷ್ಟಗೆ ಇದೇ ಸ್ವರ್ಗವು. ಅಸಂತುಷ್ಟಗೆ ಇದೇ ನರಕವು ಎಂದು ಭಾವಿಸಬೇಕು.

೧೨ ಪ್ರ—ಸುಖವನ್ನು ಸ್ವರ್ಗವೆಂದು ದುಃಖವನ್ನು ನರಕವೆಂದು ಭಾವಿಸಿಕೊಳ್ಳುವುದೇ ಹೊರತು ವಾಸ್ತವವಾಗಿ ಸ್ವರ್ಗ ನರಕಗಳೆಲ್ಲವಷ್ಟೆ ?

ಉ—ಅದೇಕಯ್ಯಾ ಪ್ರತ್ಯಕ್ಷದಲ್ಲಿ ಫಲಾನುಭವವೇ ಸಿದ್ಧವಾಗಿರುವಾಗ ಭಾವನೆಯೇ ?

" ಅತ್ಯುತ್ಕಟೈಃ ಪುಣ್ಯಪಾಪೈರಿಹೈವ ಫಲಮಶ್ನುತೇ "

" ಇಹ ದುಶ್ಚರಿತೈಃ ಕೇಚಿತ್ ಕೇಚಿತ್ಪೂರ್ವಕೃತೈಸ್ತಥಾ |
ಪ್ರಾಪ್ನುವನ್ತಿ ದುರಾತ್ಮಾನೋ ನರಾ ರೂಪವಿಪರ್ಯಯಮ್ " ಮನು ೧೧-೪೮ ||

" ಅತ್ರೈವ ನರಕಃ ಸ್ವರ್ಗಃ ಇತಿ ಮಾತಃ ಪ್ರಚಕ್ಷತೇ |
ಯಾ ಯಾತನಾ ವೈ ನಾರಕ್ಯಃ ತಾ ಇಹಾಪ್ಯುಪಲಕ್ಷಿತಾಃ " ಭಾಗ ೩-೩೦-೨೯ ||

(ಅತಿಶಯವಾದ ಪುಣ್ಯ ಪಾಪಕರ್ಮಗಳ ಫಲವನ್ನು ಇಲ್ಲಿಯೇ ಅನುಭವಿಸುತ್ತಾನೆ. ಕೆಲವರು ದುರಾತ್ಮರು ಈಗ ಇಲ್ಲಿ ದುಷ್ಕರ್ಮಗಳಂ ಮಾಡಿ ಕುಷ್ಠ, ಕ್ಷಯ, ಮೇಹ ಮುಂತಾದ ಮಹಾರೋಗ ದುಃಖಗಳನ್ನೂ, ಕುಂಟು ಕುರುಡು ಕಿವುಡುತನಗಳನ್ನೂ ಹೊಂದುವರು. "ಎಲೆ ತಾಯಿಯೇ ಇಲ್ಲಿಯೇ ನರಕವು, ಸ್ವರ್ಗವು, ಇದೆಯೆಂದು; ಸಹಿಸಲಶಕ್ಯವಾದ ತೀವ್ರ ವೇದನೆಗಳೆಲ್ಲವೂ ಇಲ್ಲಿಯೇ ಕಾಣಬಂದಿವೆಯೆಂದು; ಹೇಳುತ್ತಾರೆ" ಎಂದು ಕಪಿಲವಚನವುಂಟು.)

"ಇಹಾಪ್ಯುಪಲಕ್ಷಿತಾಃ" ಎಂದಿರುವುದರಿಂದ ಬಹುಕಾಲ ವಾಸಾರ್ಥವಾಗಿ "ನರಕೇನಿಯತಂವಾಸಃ; ತೇ ತಂ ಭುಕ್ತ್ವಾ ಸ್ವರ್ಗಲೋಕಂವಿಶಾಲಂ" ಎಂದು ಹೇಳಿರುವಂತೆ ಸ್ವರ್ಗ ನರಕಸ್ಥಾನಗಳು ಶಾಶ್ವತವಾಗಿಯೂ, ವಾಸ್ತವಗಳಾಗಿಯೂ, ಚಿರಕಾಲಾನುಭಾವ್ಯಗಳಾಗಿಯೂ, ಕೇವಲ ಸೂಕ್ಷ್ಮದೇಹ ಮಾತ್ರಗಮ್ಯಗಳಾಗಿಯೂ ಇವೆ.

ಈಗ ಇಲ್ಲಿ ಹೇಳಿರುವುದು ಅಲ್ಪಕಾಲಾನುಭವದಿಂದ ನಿವರ್ತ್ಯಗಳಾಗಿವೆ. ಮತ್ತು ಅವಕ್ಕೆ ಈ ಲೋಕವು ಆದರ್ಶ (ಕನ್ನಡಿ) ರೂಪವೆಂದು ತಿಳಿಯಿರಿ.

ಪ್ರಕೃತ ಈಗ ನಾವಿಲ್ಲಿ ಅನುಭವಿಸುವ ಮಹಾರೋಗಾದ್ಯುಪದ್ರವಗಳೂ, ರಾಜದಂಡನಕಾರಾಗೃಹವಾಸಾದಿಗಳೂ, ಇನ್ನು ಸಹಜ ಸಹಜ ಎಂಬ ಗರ್ಭವೈಕೃತ ಪ್ರಸವವೇದನೆ ಜರಾಮರಣವೇದನಾದಿಗಳೂ, ಪಾಪಫಲಗಳಾದ ನರಕಗಳಲ್ಲವೇ. ಇತ್ಯಾದಿಗಳೆಲ್ಲವೂ ವಾಸ್ತವಗಳಲ್ಲದೆ ಭಾವನಾಮಯವಾಗುವುದೇ ? ಆ ವೇದನೆಯೂ ವಾಸ್ತವವೇ. ತತ್ಕಾರಣಗಳೂ ಅಗ್ನಿವಿಷಾದಿಗಳೂ ವಾಸ್ತವವೇ. ಆದರೆ ಇಲ್ಲಿ ಕೆಲವು ಕೆಲವು ಭಾವನಾತ್ಮಕವಾಗಿ ಇರುವ ಸ್ವರ್ಗ ನರಕಗಳೆಂಬುವು ಇಂತಹವೆಂದು ಬೇರೆಬೇರೆ ಯಾಗಿ ಪರಾಶರರರು ಹೇಳಿದ್ದಾರೆ. ಅದೆಲ್ಲವೂ ಭಾಗ್ಯಬಡತನ, ಶತ್ರುಮಿತ್ರ, ನೀ ಚೋಚ್ಚ, ಸಾಮಾನ್ಯವಿಶೇಷ, ಮಾನಾವಮಾನ, ಲಾಭಾಲಾಭ, ಇತ್ಯಾದಿ ದ್ವಂದ್ವ ಭಾವಗಳ ಇಷ್ಟಾನಿಷ್ಟವ್ಯವಸ್ಥಾರ್ಥವಾಗಿರುವುದು:—

ಶ್ಲೋ|| " ಮನಃಪ್ರೀತಿಕರಃ ಸ್ವರ್ಗೋ ನರಕಸ್ತದ್ವಿಪರ್ಯಯಃ |
ನರಕಸ್ವರ್ಗ ಸಂಜ್ಞೇ ವೈ ಪಾಪಪುಣ್ಯೇ ದ್ವಿಜೋತ್ತಮ ||೪೬||
ವಿ. ಪು. ೨ ಅ. ೬ ಅಧ್ಯಾಯ.

ವಸ್ತ್ವೇಕಮೇವ ದುಃಖಾಯ ಸುಖಾಯೇರ್ಷ್ಯೋದ್ಭವಾಯಚ |
ತದೇವ ಪ್ರೀತಯೇ ಭೂತ್ವಾ ಪುನರ್ದುಃಖಾಯ ಜಾಯತೇ ||೪೭||
ತದೇವ ಕೋಪಾಯ ಯತಃ ಪ್ರಸಾದಾಯ ಚ ಜಾಯತೇ |
ತಸ್ಮಾದ್ದುಃಖಾತ್ಮಕಂ ನಾಸ್ತಿ ನಚ ಕಿಂಚಿತ್ಸುಖಾತ್ಮಕಮ್ ||೪೮||
ಮನಸಃ ಪರಿಣಾಮೋಽಯಂ ಸುಖದುಃಖಾದಿ ಲಕ್ಷಣಃ |"
" ಮನ ಏವ ಮನುಷ್ಯಾಣಾಂ ಕಾರಣಂ ಬಂಧಮೋಕ್ಷಯೋಃ ||೪೯|| "

(ಮನಕ್ಕೆ ಹರ್ಷತೃಪ್ತಿಗಳನ್ನುಂಟುಮಾಡುವುದೇ ಸ್ವರ್ಗವು; ವಿಷಾದಶೋಕ ಮೋಹಾತೃಪ್ತಿಗಳನ್ನುಂಟುಮಾಡುವುದೇ ನರಕವು. ಈ ಸ್ವರ್ಗ ನರಕಗಳೆರಡನ್ನೂ ಪುಣ್ಯ ಪಾಪ ಪರಿಣಾಮವೆಂದು ತಿಳಿಯಬೇಕು. ಒಂದೇ ವಸ್ತುವು ಒಂದೇ ಪ್ರಾಣಿ ಯು ಕೂಡ ಇಷ್ಟವಾದಾಗ ಸುಖಾಸ್ಪದವೂ; ಅನಿಷ್ಟವಾದಾಗ ಅವೇ ಕೋಪಾ ಸೂಯಾ ವಿಷಾದಾದಿ ದುಃಖಾಸ್ಪದವೂ; ಮರಳಿಯು ಅವುಗಳೇ ಪ್ರೀತಿಗೂ ಮತ್ತೊ ಮ್ಮೆ ವ್ಯಸನಕ್ಕೂ ಕಾರಣವಾಗುವುದರಿಂದ ಯಾವುದೊಂದು ವಸ್ತುವಾಗಲಿ ಪ್ರಾಣಿ ಯಾಗಲಿ ಸ್ವಾಭಾವಿಕವಾಗಿ ಸುಖರೂಪವೂ ಅಲ್ಲ, ದುಃಖರೂಪವೂ ಅಲ್ಲ, ಆ ವಸ್ತು ಗಳನ್ನು ಉಪಯೋಗಿಸಿಕೊಳ್ಳತಕ್ಕವನ ಮನಸ್ಸಿನ ನೈರ್ಮಲ್ಯ ಕಾಲುಷ್ಯಭಾವಗಳಿಗೆ

ತಕ್ಕಂತೆಯೇ ಸುಖದುಃಖ ನಿಮಿತ್ತಗಳೆನಿಸಿಕೊಳ್ಳುವುವು. ಆದರಿಂದ ಮನುಷ್ಯನ ಸಂಸಾರದ ಬಂಧದುಃಖಕ್ಕೂ ಅದರ ಬಿಡುಗಡೆಯ ಸತ್ಸುಖಕ್ಕೂ ಅವನವನ ಮನಸ್ಸಿನ ಪ್ರವೃತ್ತಿ ನಿವೃತ್ತಿಗಳೇ ಕಾರಣವೆಂದು ನಿಸ್ಸಂಶಯವಾಗಿ ನಂಬಿತಕ್ಕದ್ದು.)

ಇನ್ನು ಈ ಭಾಗ್ಯ ಬಡತನಗಳಲ್ಲಿರುವ ಸುಖದ ಪರಿಮಾಣ (ಇಯತ್ತೆ) ದಲ್ಲಿ ಬಹಳವಾದ ತರತಮಭಾವಗಳುಂಟೆಂಬುದು ಕೂಡ ಜಗತ್ಪ್ರಸಿದ್ಧವಾಗಿದೆಯಷ್ಟೆ? ಆದರೆ ಆ ತಾರತಮ್ಯವನ್ನು ಕುರಿತು ಶ್ರುತಿಶಿರಸ್ಸಿಂದ್ಧಾಂತವೊಂದು ಅಧ್ಯಾತ್ಮ ವಿದ್ಯಾತತ್ವರಹಸ್ಯರೂಪವಾಗಿ ಅತಿ ಚೋದ್ಯವಾಗಿ ಈಗ ಹೀಗೆ ವೇದ್ಯವಾಗಬೇಕಾಗಿದೆ. ಅದೆಂತೆಂದರೆ:—ಈ ಭೂಮಿಯಲ್ಲಿರುವ ಸರ್ವಸಂಪತ್ತು, ಸರ್ವಾಧಿಕಾರ, ಸರ್ವಸೌಭಾಗ್ಯ, ಸರ್ವಬಲಶಕ್ತಿಗಳು, ಸರ್ವಭೋಗ್ಯಸಾಮಗ್ರಿಗಳು, ಇವುಗಳಿಂದುಂಟಾಗುವ ಸರ್ವಸುಖಗಳಿಂದಲು ಸಂಪನ್ನನಾದ ಸಾರ್ವಭೌಮನೆನಿಸಿಕೊಂಡ ಚಕ್ರವರ್ತಿ ಯೊಬ್ಬನಿದ್ದರೆ ಅಂತಹವನ ಆನಂದವನ್ನು ಒಂದು ಮಾನುಷಾನಂದವೆಂದು ತಿಳಿಯಿರಿ. ಇಂತಹ ಮಾನುಷಾನಂದವು ಒಂದುನೂರಾದರೆ ಒಂದು ದೇವಾನಂದವು; ಆ ದೇವಾನಂದವು ಒಂದುನೂರಾದರೆ ಒಂದು ಇಂದ್ರಾನಂದವು; ಈ ಇಂದ್ರಾನಂದವು ಒಂದುನೂರಾದರೆ ಬೃಹಸ್ಪತಿಯಾನಂದವೊಂದಾಗುವುದು; ಈ ಬೃಹಸ್ಪತ್ಯಾನಂದವು ಒಂದುನೂರಾದರೆ ಪ್ರಜಾಪ್ರತಿಯಾನಂದವೊಂದಿನಿಸುವುದು; ಆ ಪ್ರಜಾಪತ್ಯಾನಂದವು ಒಂದುಶತವಾದರೆ ಒಂದು ಬ್ರಹ್ಮಾನಂದವಾಗುವುದೆಂದು ಹೇಳಿ, ಆದರದರ ಜತೆಜತೆಯಲ್ಲಿಯೇ ಕಾಮಹತನಲ್ಲದ (ಯಾವುದೊಂದು ಬಯಕೆಯನ್ನೂ ಬಯಸದ) ಶ್ರೋತ್ರಿಯನೂ ಶುದ್ಧಸಾಧುವೂ ಆದ ಬಟ್ಟಬಡವನ ಆನಂದಕ್ಕೆ ಮೇಲೆ ಹೇಳಿದ ಚಕ್ರವರ್ತ್ಯಾದಿಗಳ ಆನಂದಗಳೊಂದೂ, ಹೋಲಿಸಲೀಡಾಗವು. ನಿಷ್ಕಾಮನ ಕಾಮಕ್ಕೊಳಗಾಗದವನ ಆನಂದವೇ ಅತ್ಯುತ್ತಮಾನಂದವೆಂದು ವೇದವು ಒಕ್ಕಣಿಸಿರುವುದರಿಂದ ಪರಮಾರ್ಥವಾಗಿ ಇಂದ್ರಿಯವಿಷಯಗಳನ್ನು ತಾನಾಗಿಯೇ ಬೇಕೆಂದು ಬಯಸದಿರುವ ಬಡವನೇ (ಸಾಧು) ಭಗವಂತನ ಬಳಿಯಲ್ಲಿ ಬಲುಬಲು ಭಾಗ್ಯವಂತನೆಂಬ ಸಿದ್ಧಾಂತವೊಂದು ಜಗತ್ಪ್ರಸಿದ್ಧವಾಗಿದೆ.

ಆಗಲಿ ಅದು ವೇದಾಂತಭಾಗದ ತತ್ತ್ವಚಿಂತನೆಯ ಮಾತಾಯಿತು. ಹಾಗೆ ಯಾವುದೊಂದು ವಿಷಯವನ್ನೂ ಬಯಸದೆ ನಿಶ್ಚಿಂತನಾಗಿ ವಿರಕ್ತನಾಗಿರುವುದು ದಿಟವಾಗಿ ನಿವೃತ್ತಿಧರ್ಮಪರನಾದ ಉತ್ತಮಾಧಿಕಾರಿಯೆನಿಸಿಕೊಂಡ ಮಹಾತ್ಮನಿಗೆ ಸೇರಿರುವುದು ವಾಸ್ತವವೇ ಸರಿ. ಈಗ ಅಂತಹವರೆಲ್ಲಿದ್ದಾರೆ? " ಈಗಿಲ್ಲಿರುವ ಪ್ರವೃತ್ತಿ

ಧರ್ಮಪರರಾದ ನಮ್ಮಂತಹ ಸಂತತ ಸಂಸಾರಿಗಳಿಗೆ ಆ ವೈರಾಗ್ಯಭಾಗ್ಯದ ವಿಚಾರವೇ ತಕ್ಕೆ ? ಪ್ರಕೃತದಲ್ಲಿ ಪ್ರಸಕ್ತವಾಗಿರುವ ಅವಶ್ಯಭೋಗ್ಯವಾದ ನಮ್ಮ ಬಡತನ ಭಾಗ್ಯಗಳ ವಿಚಾರವೆಷ್ಟೋ ಅಷ್ಟರಲ್ಲಿ ನಾವಿರುವ'' ಎನ್ನಬಹುದು. ಆದರೆ ಅದರ ನಿಜಸ್ಥಿತಿ ಹಾಗಿಲ್ಲ. ಈ ಭೂಮಿಯಲ್ಲಿ ಬಾಳುತ್ತಿರುವ ಎಲ್ಲಾ ಬಗೆಯ ಜನರಲ್ಲಿಯೂ ಬಡತನ ಭಾಗ್ಯಗಳೆಂಬಿವು ಒಂದು ವ್ಯವಸ್ಥೆಗೂ ಒಳಪಡದೆ ಸ್ಥಿರವೂ ಅಲ್ಲದೆ ಕ್ಷಣಿಕಗಳೆನಿಸಿವೆ:—ನನಗೀಗ ಯಾವುದೋ ಒಂದು ಬಗೆಯಿಂದ ಕೈಗೆ ನಾಲ್ಕು ಹಣವು ದೊರೆತು ಹೊಟ್ಟೆ ತುಂಬಿತೆಂದುಕೊಂಡರೆ ನಾನೇ ಪುಣ್ಯವಂತನು, ನಾನೇ ಭಾಗ್ಯಶಾಲಿಯೆಂದು ಹಿಗ್ಗುವೆನು. ಮಾಡಿದ ಯತ್ನವು ಸಫಲವಾಗದೆ ಕಾಸು ಕೈಗೂಡದೆ ಕುಟುಂಬದ ಕೋರಿಕೆ ಬಲವಾಗಿ ಹೊಟ್ಟೆ ತುಂಬದಿದ್ದಾಗ ನಾನು ನಿರ್ಭಾಗ್ಯ, ಪಾಪಿ, ಈ ಬಡತನದ ದುಃಖಾನುಭವವನ್ನು ಹೂಡಬೇಕೆಂದು ಸೃಷ್ಟಿಕರ್ತಾರನಾದ ಬ್ರಹ್ಮನು ನನ್ನ ಹಣೆಯಲ್ಲಿ ಬರೆದಿದ್ದಾನೆ'' ಎಂದು ನನ್ನನ್ನೂ ದೈವವನ್ನೂ ನಾನೇ ಬಯ್ದುಕೊಳ್ಳುತ್ತ ಕುಳ್ಳಿರುವೆನು. ಮರಳಿಯೊಂದುವೇಳೆ ನನಗೆಯೇ ರಾಜಾಶ್ರಯವೋ ಧನವಂತರಾಶ್ರಯವೋ ದೊರೆಯಿತೆಂದರೆ ಆಗ ನಾನೇ ಭಾಗ್ಯವಂತನೆಂದು ಹಿಗ್ಗುವೆನಲ್ಲವೆ ? ಹೀಗಿರುವುದರಿಂದ ಈ ಬಡತನ ಭಾಗ್ಯಗಳ ಸ್ಥಿತಿಗತಿಗಳು ಋತುಕಾಲಧರ್ಮದಲ್ಲಿ ತೋರಿಬರುತ್ತಿರುವ ಶೀತೋಷ್ಣಗಳ ಸ್ಥಿತಿಗತಿಯಂತೆ ಬರುವುದು, ಹೋಗುವುದು, ಎಂಬ ಚಕ್ರಪರಿವರ್ತನಕ್ರಮದಿಂದ ನಶ್ವರವೆನಿಸಿದೆಯಲ್ಲದೆ ಎಂದಿಗೂ ಯಾರಲ್ಲಿಯೂ ಏಕರೂಪವಾಗಿ ಶಾಶ್ವತವೆನಿಸಿರದು. ಆದಕಾರಣ ತನ್ನಿಮಿತ್ತಗಳಾದ ಸುಖದುಃಖಗಳೆಲ್ಲವೂ ನಶ್ವರಗಳು, ಅವ್ಯವಸ್ಥಿತಗಳು, ವಿಶ್ವಾಸಾಸ್ಪದಗಳಲ್ಲವು.

ಇದರಮೇಲೆ ಈ ಭೂಮಂಡಲದಲ್ಲಿರುವ ಸರ್ವಜೀವರಾಶಿಗಳಿಗೂ ಎಂತಿದ್ದರೂ ಪಾಪಪುಣ್ಯ ವಿಚಾರಾರ್ಥವಾಗಿ ಧರ್ಮರಾಜನ ದರ್ಶನವಾಗಲೇಬೇಕೆಂಬ ನಮ್ಮ ಸನಾತನಾರ್ಯಧರ್ಮ ಸಿದ್ಧಾಂತವೊಂದು ಸುಪ್ರಸಿದ್ಧವಾಗಿದೆಯಷ್ಟೆ ? ಆ ಯಮನ ಬಳಿಗೆ ಪ್ರಯಾಣಮಾಡುವಾಗ ಈ ಬಡತನದ ಈ ಭಾಗ್ಯದ ಸಣ್ಣ ದೊಡ್ಡ ಒಡಲುಗಳನ್ನು ಇಲ್ಲಿಯೇ ಬಿಟ್ಟು ; ಮತ್ತೊಂದು ಯಾತನಾಸಹಿಷ್ಣುವಾದ ಸೂಕ್ಷ್ಮರೂಪದ ಒಡಲನ್ನು ಹೊಂದಿ ಆತನ ಆಸ್ಥಾನಕ್ಕೆ ಹೋದಮೇಲೆ ಆ ಜನರಾಯನ ಇದಿರಲ್ಲಿ ಈ ಬಡತನ ಭಾಗ್ಯಗಳ ವಿಚಾರವೇ ಇಲ್ಲದೆ ಅವರವರು ನಡೆಯಿಸಿದ್ದ ಸುಕೃತ ದುಷ್ಕೃತಗಳ ನ್ಯೂನಾಧಿಕಾಂಶ ವಿಚಾರವೊಂದೇ ವಿಮರ್ಶಿಸಲ್ಪಡುವುದು. ಆ ವಿಚಾರಣೆಯಲ್ಲಿಯು ಮುಖ್ಯವಾಗಿ ಮಾನವರಲ್ಲಿ “ ಅಹಿಂಸೆ ಸತ್ಯ ಅಸ್ತೇಯ ಬ್ರಹ್ಮಚರ್ಯ ಶೌಚ ಶಮದ

ಮೊದಿ ಸದ್ಧರ್ಮಗಳು (ಪುಣ್ಯ) ಯಾರಾರಲ್ಲಿ ಎಷ್ಟೆಷ್ಟಿವೆ ? ಹಿಂಸೆ ಅನೃತ ಕಳವು ಹಾದರ ಮದ್ಯಮಾಂಸಸೇವೆನೆ, ಇವು ಉಳ್ಳವರ ಸಹವಾಸವೊಂದು ; ಇನ್ನೂ ಅಶು ಚಿತ್ತ ಅತಿ ಕ್ರೋಧಾತಿಲೋಭಾದಿಯಾದ ಅಧರ್ಮಗಳು (ಪಾಪ) ಯಾರಾರಲ್ಲಿ ಎಷ್ಟೆಷ್ಟಿವೆ ?'' ಎಂದು ಈ ಭಾಗದ ತರತಮಭಾವದ ವಿಚಾರವೊಂದೇ ನಡೆಯುವಾಗ ಇಲ್ಲಿ ಬಡವನೆಂದುಕೊಂಡಿರುವನು ಅಲ್ಲಿ ಭಾಗ್ಯವಂತನೆನಿಸಿಕೊಳ್ಳಬಹುದು. ಇಲ್ಲಿ ಭಾಗ್ಯವಂತನೆನಿಸಿಕೊಂಡಿದ್ದವನು ಕೂಡ ಆ ಯಮನ ಬಳಿಯಲ್ಲಿ ಬಡವನೂ ಆಗಬಹುದಾಗಿದೆಯಲ್ಲವೆ ?

ಅದೇತಕ್ಕೆ ಅಷ್ಟು ವಿಪರೀತವಾಗಬೇಕೆಂದರೆ:—ಇಲ್ಲಿ ಎಷ್ಟೆಷ್ಟು ಮನಸ್ಸಿಗೆ ಪ್ರಿಯವಾದುದೆಂದು ಇಂದ್ರಿಯಗಳಿಗೆ ಅನುಕೂಲವೆಂದು ತಿಳಿದು ಧನೋಪಪತ್ತಿಯುಳ್ಳವನು ಏನೇನೋ ಭೋಗಾರ್ಹವಾದ ವಸ್ತುವಾಹನ ವನಸ್ಪತ್ಯಾದಿಗಳನ್ನೂ, ಮನುಷ್ಯ ಮೃಗ ಪಶು ಪಕ್ಷಿ ಮುಂತಾದ ಸುಖಸಾಮಗ್ರಿಗಳನ್ನೂ, ನನಗೆ ತನಗೆ ಎಂದು ಸ್ವಕೀಯಾಭಿಮಾನದಿಂದ ತಂದು ತಂದು ಮನೆಯಲ್ಲಿಯೂ ತೋಟದಲ್ಲಿಯೂ ಕೂಡಿಸಿಟ್ಟುಕೊಳ್ಳುವನೋ ಅಷ್ಟಷ್ಟು ಶಲ್ಯಪ್ರಾಯವಾದ ದುಃಖಮಯಗಳಾದ ಗೂಟಗಳು (ಮುಳ್ಳುಗಳು) ಹೃದಯದಲ್ಲಿ ನಟ್ಟಿಕೊಂಡು ಒದರಿದರೆ ಹೋಗದೆ ತಾನು ಬಿಟ್ಟರೂ ಅವು ಬಿಡದೆ ಆ ಮನದ ಮುಳ್ಳುಗಳನ್ನು ಕಿತ್ತುಹಾಕಲು ಸಾಧ್ಯವಲ್ಲದೆ ಆ ಪುರುಷನನ್ನೇ ಕಾಮಮಯನನ್ನಾಗಿ ಮಾಡಿಬಿಡುವುವು. ಇಷ್ಟೇ ಅಲ್ಲದೆ ಮುಂದಕ್ಕೂ ಅಸಂಪೂರ್ಣವಾಗಿದ್ದ ಇನ್ನೂ ಸ್ವಲ್ಪ ಅನುಭವಿಸಬೇಕೆಂದಿದ್ದಂತಹ ಮಾನಸಿಕವಾಗಿರುವ ಆಯಾಕಾಮಗಳ ಅನುಭವಕ್ಕೋಸ್ಕರವೇ ಅನೇಕ ಜನ್ಮಗಳನ್ನೇ ಪಡೆಯುವಂತೆ ಮಾಡಿ ಮೊದಲೆಷ್ಟು ಉಚ್ಚಗತಿಸ್ಥಿತಿಗೆ ಬಂದಿದ್ದನೋ ಅಷ್ಟೂ ಅಷ್ಟು ನೀಚಗತಿಸ್ಥಿತಿಗೆ ತಂದು ಬಿಡುವುವು. ಹಾಗೆಯೇ ಪರಾಶರ ಸೂಕ್ತಿಯುಂಟು.

ಶ್ಲೋ॥ " ಯಾವತಃ ಕುರುತೇ ಜಂತುಃ ಸಂಬಂಧಾನ್ ಮನಸಃ ಪ್ರಿಯಾನ್ ।
ತಾವಂತೋಽಸ್ಯ ನಿಖನ್ಯಂತೇ ಹೃದಯೇ ಶೋಕಶಂಕವಃ ॥ "

ವಿಷ್ಣುವು ೧-೧೭-೬೬.

(ಯಾವನು ಮನಕ್ಕಿಷ್ಟವಾದ ವಸ್ತುಗಳ ಸಂಬಂಧವನ್ನು ಎಷ್ಟೆಷ್ಟು ಕಲ್ಪಿಸಿಕೊಳ್ಳುವನೋ ಅಷ್ಟಷ್ಟು ಶೋಕಶಲ್ಯಗಳು ಅವನ ಮನದಲ್ಲಿ ನಟ್ಟಿಕೊಳ್ಳುವುವು) ಎಂದು.

" ಅದೇಕೆ ಹಾಗೆ ನಟ್ಟಿಕೊಳ್ಳಬೇಕು ? ನಾವು ಮನೆಯಲ್ಲಿದ್ದರೇ ಅಲ್ಲವೆ ನಮಗೆ ಆ ಮನೆಯ ಪದಾರ್ಥಗಳ ಸಂಬಂಧವಿರುವುದು ? ನಾವೀಗ ವಿವೇಕದಿಂದ ಈ

ದೇಹಗೇಹ ಸಂಬಂಧವನ್ನೇ ಬಿಟ್ಟು ವಿರಕ್ತಿಯಿಂದ ತೀರ್ಥಕ್ಷೇತ್ರಯಾತ್ರೆಗಾಗಿ ಬೇರೆ ಯೆಡೆಗೆ ಹೋಗುವಾಗ ಇವು ವೊಂದೂ ನಮ್ಮ ಹಿಂದೆ ಬರುವುವಲ್ಲವಷ್ಟೆ ?'' ಎಂಬೀ ಯಾಕ್ಷೇಪವು ತೋರಬಹುದು. ಇದಕ್ಕೆ ಸಮಾಧಾನವು ಸಂಸ್ಕಾರಕರ್ಮಪ್ರಶ್ನೆಯಲ್ಲಿ ಸಂಸ್ಕಾರ-ವಾಸನಾ-ಸ್ವರೂಪವಿಚಾರದಲ್ಲಿ ಹೇಳಿದೆ.

ಆದರ ಮರ್ಮವೇನೆಂದರೆ:—ಮನುಷ್ಯನು ಈ ದೇಹಾಭಿಮಾನದಿಂದ ತತ್ಪೋಷಣಾರ್ಥವಾಗಿಯು, ಅತೃಪ್ತಗಳಾದ ಇಂದ್ರಿಯಗಳ ತೋಷಣಾರ್ಥವಾಗಿಯು ಈ ಗೃಹವನ್ನೂ, ತದುಪಕರಣಗಳನ್ನೂ, ದಾರಪುತ್ರ ದಾಸವರ್ಗವನ್ನೂ, ಯಥೇಚ್ಛವಾಗಿ ಕಲ್ಪಿಸಿಕೊಂಡಿರುವನಷ್ಟೆ? ಇವೆಲ್ಲವೂ ಆಯಾಸ್ಥಾನಗಳಲ್ಲಿ ಇರುವುದು ಮಾತ್ರವೇ ಅಲ್ಲದೆ ಒಟ್ಟಿಗೆ ಒಂದೊಂದೂ ಗುಂಪು ಕಟ್ಟಿಕೊಂಡು ನಮ್ಮನ್ನು ಬಿಡದೆ ಯಾವಾಗಲೂ ನಮ್ಮ ಮನದಲ್ಲಿಯೇ ಅಭಿಮಾನರೂಪದಿಂದ ವಾಸನಾಮಯವಾಗಿ ವಾಸಮಾಡುತ್ತಿವೆ. ಅವಕ್ಕೆ ಅಲ್ಲಿ ಕೇಡುಂಟಾದರೂ, ಸ್ವರೂಪನಾಶವೇ ಪ್ರಾಪ್ತವಾದರೂ, ನಮ್ಮ ಮನವನ್ನು ಆಗಾಗ ಪ್ರವೇಶಿಸಿದ್ದು, ಭಾವನಾತ್ಮಕವಾಗಿ ಬಲಿಪಟ್ಟು, ಸ್ಮೃತಿಗೋಚರವಾಗಿರುವ ಆ ಭಾವಗಳಿಗೆ ಮಾತ್ರ ನಾಶವೇ ಇಲ್ಲದೆ ವಾಸನಾತ್ಮಕ ಬೀಜಗಳಾಗೇರ್ಪಟ್ಟು ಜನ್ಮಾಂತರಗಳ ಬೆಳೆಗಳನ್ನು ಬೆಳೆಯುತ್ತ ಸ್ವರೂಪಾನಂದಾಭಿವ್ಯಕ್ತಿಗೆ (ಮೋಕ್ಷಕ್ಕೆ) ಪ್ರತಿಬಂಧಕಗಳಾಗಿ ಆತ್ಮಸ್ವರೂಪವನ್ನೇ ಮರೆಮಾಡಿವೆ.

ಶ್ಲೋ॥ " ಯದ್ಯದ್ಗೃಹೇ ತನ್ಮನಸಿ ಯತ್ರ ಕುತ್ರಾ ವತಿಷ್ಠತಃ ।
ನಾಶದಾ ಹೋಪಪರಿಣಂ ಕುತಸ್ತತ್ರೈವ ತಿಷ್ಠತಿ ॥ ೧-೧೭-೭೭ ವಿ ಪು.

(ಯಾವುದು ಯಾವುದು ಮನೆಯಲ್ಲಿದೆಯೋ ಅದೆಲ್ಲವೂ ತನ್ನ ಮನದಲ್ಲಿಯೇ ವಸಿಸುತ್ತಿವೆ. ಆ ಮನೆಯು, ಆದರೊಳಗಿದ್ದ ವಸ್ತುಗಳು, ಪ್ರಾಣಿಗಳು, ಸುಟ್ಟು ಕೆಟ್ಟು ಬಿದ್ದುಹೋದರೂ, ಯಾರಾದರೂ ತೆಗೆದುಕೊಂಡುಹೋದರೂ, ಪ್ರಾಣಿಗಳು ಸತ್ತುಹೋದರೂ, ತದಭಿಮಾನಿಯಾದವನ ಮನದಲ್ಲಿ ಭಾವನಾತ್ಮಕವಾಗಿ ಬಂದು ಸೇರಿದ್ದ ವಸ್ತುಗಳೂ, ಪ್ರಾಣಿಗಳೂ, ನಷ್ಟವಾಗವು; ಪರರಿಂದ ಅಪಹರಿಸಲ್ಪಡವು. ಎಂದಿಗೂ ಆ ಮನಸ್ಸನ್ನು ಬಿಟ್ಟುಹೋಗವು. ಚಿಂತನಮಾಡಿದಷ್ಟು ಬಲಪಟ್ಟು ಭದ್ರವಾಗುವುವು.) ಅದರಿಂದ ಬಾಹ್ಯವಾದ ವಸ್ತುಗಳಿಂದಾಗುವ ಸುಖದುಃಖಗಳಿಗಿಂತಲು ಆಂತರವಾದ ಭಾವನಾತ್ಮಕ ಪದಾರ್ಥಗಳಿಂದುಂಟಾಗುವ ಸುಖದುಃಖಗಳು ಕ್ಷಣಿಕಗಳಾಗದೆ ಚಿರಸ್ಥಾಯಿಗಳೆಂದು ಭಾವವು.

ಆದುದರಿಂದ ಬುದ್ಧಿಶಾಲಿಯಾದವನು ಕ್ಷಣಿಕವಾದ ಅಸ್ಥಿರವಾದ ಈ ಲೋಕದ ಭಾಗ್ಯ ಬಡತನಗಳ ಗತಿ ಸ್ಥಿತಿಯನ್ನೂ, ಅವರಿಂದಾಗುವ ತಾತ್ಕಾಲಿಕ ಸುಖದುಃ

ಖಸ್ಥಿತಿಗತಿಯನ್ನೂ, ಮನದಲ್ಲಿ ಬಗೆಯದೆ ನಾನು ನಾನು ಎಂಬ ಅಭಿಮಾನಕ್ಕೆ ವಿಷಯನಾಗಿರುವ ತನ್ನಾತ್ಮನ ನಿಜಸ್ಥಿತಿಗತಿಗಳ ವಿಷಯವನ್ನು ಮನಸಿಕ್ಕೆ ತಂದುಕೊಂಡು ಮನೆಯಲ್ಲಿದ್ದರೂ ತಾವರೆಯೆಲೆಯ ಮೇಲಣ ನೀರಿನಂತೆ ನಿರ್ಲಿಪ್ತನಾಗಿರುತ್ತ ಈ ಸಂಸಾರದ ಸೆರೆಯಿಂದ ಬಿಡುಗಡೆ ಹೊಂದುವುದಕ್ಕೆ ತಕ್ಕಂತಹ ಉಪಾಯವನ್ನು ಹುಡುಕುವ ಯತ್ನದಲ್ಲಿಯೇ ಇರಬೇಕೆಂದು ವ್ಯಾಸಾಭಿಪ್ರಾಯವು:—

ಶ್ಲೋ|| "ಕ್ವಾಸೇ ಕ್ವಚ ಗಮಿಷ್ಯಾಮಿ ಕೋನ್ವಹಂ ಕಿಮಿಹಸ್ಥಿತಃ |
ಕಸ್ಮಾತ್ಕಿಮನು ಶೋಚೇಯಮಿತ್ಯೇವಂ ಸ್ಥಾಪಯೇನ್ಮನಃ || ಭಾ. ಶಾಂ. ೨೮-೪೦.
ಸುಖಂ ಚ ದುಃಖಂಚ ಭವಾ ಭವೌಚ |
ಲಾಭಾ ಲಾಭೌ ಮರಣಂ ಜೀವಿತಂ ಚ ||
ಪರ್ಯಾಯಶಃ ಸರ್ವಮೇತೇ ಸ್ಪೃಶನ್ತಿ |
ತಸ್ಮಾದ್ಧೀರೋ ನ ಚ ಹೃಷ್ಯೇನ್ನಶೋಚೇತ್ || ವಿ-ನೀ ||
ಶೋಕಸ್ಥಾನ ಸಹಸ್ರಾಣಿ ಭಯಸ್ಥಾನ ಶತಾನಿ ಚ | (ಭಾ-ಶಾ)
ದಿವಸೇ ದಿವಸೇ ಮೂಢಮಾವಿಶನ್ತಿ ನ ಪಂಡಿತಮ್ ||"

(ನಾನು ಯಾರು? ಎಲ್ಲಿದ್ದೇನೆ? ಎಲ್ಲಿಗೆ ಹೋಗಬೇಕು? ಇಲ್ಲಿಗೇತಕ್ಕೆ ಬಂದಿರುವೆನು? ಯಾವ ಕಾರಣದಿಂದ ಯಾವುದನ್ನು ಕುರಿತು ನಾನು ಚಿಂತಿಸಬೇಕಾಗಿದೆ? ಎಂದು ಮನಸ್ಸನ್ನು ಅಧ್ಯಾತ್ಮಚಿಂತನದಲ್ಲಿ ನಿಲ್ಲಿಸಿಕೊಳ್ಳಬೇಕು; ಈ ಸುಖ ದುಃಖ ಲಾಭನಾಶ ಜನನ ಮರಣಾದಿ ದ್ವಂದ್ವಗಳೆಲ್ಲವು ಪರ್ಯಾಯವಾಗಿ ಒಂದಾದಮೇಲೆ ಮತ್ತೊಂದು ಶರೀರಿಗೆ ಪ್ರಾಪ್ತವಾಗಬೇಕಾಗಿರುವುದರಿಂದ ಈ ತತ್ತ್ವವನ್ನು ತಿಳಿದಂತಹ ಧೀರನು ಈ ಸುಖಕ್ಕೆ ಸಂತೋಷಿಸಲಾರನು, ಈ ದುಃಖಕ್ಕೆ ತಗ್ಗಿಯೂ ಹೋಗನು. ಸಾವಿರಾರು ಶೋಕವಿಷಯಗಳು ಸಾವಿರಾರು ಭಯವಿಷಯಗಳು ಪ್ರತಿನಿತ್ಯವು ಮೂಢಗೆ ಬಂದೊದಗುವುವೇ ಹೊರತು ಪಂಡಿತಗೆ ಬಾರವು)

ಎಂದಿರುವುದರಿಂದ ಈ ಲೋಕಯಾತ್ರಾರ್ಥವಾಗಿ ತೆಗೆದುಕೊಂಡಿರುವ ಈ ದೇಹದ ಬಾಳಿಕೆಗೋಸ್ಕರವಾಗಿ ಪ್ರಾಪ್ತವಾಗಿರುವುದು ಈ ಭಾಗ್ಯಬಡತನಗಳು. ಇವು ಪರಲೋಕಯಾತ್ರೆಗೆ ಸಹಕಾರಿಗಳಾಗುವುದು ಸುಲಭವಲ್ಲ. ಆದರೂ ವಿವೇಕಿಯಾದವನು ಶಾಸ್ತ್ರಾನುಭವಬಲದಿಂದ ಅನಾತ್ಮೀಯವು ಅಶಾಶ್ವತವು ಆದೀಯವಸ್ತುಗಳನ್ನು ನೆಚ್ಚದೆ ಸದಾ ಆತ್ಮಸ್ಮೃತಿಯೊಡನೆ ಜಾಗರೂಕನಾಗಿ ಸ್ವಧರ್ಮದ ಕರ್ಮಯೋಗದಲ್ಲಿ ಪ್ರವರ್ತಿಸುತ್ತ ಬಂದರೆ ಅಂತಹವನಿಗೆ ಆ ಭಾಗ್ಯ ಬಡತನಗಳೇ ಆಮುಷ್ಮಿಕ ಸದ್ಗತಿಗೂ ಸಾಧಕವಾಗುವುದು. "ಯೋಗಃಕರ್ಮಸುಕೌಶಲಂ" ಎಂದು ಇದೊಂದು ಕರ್ಮಯೋಗದ ರಹಸ್ಯವೆಂದು ತಿಳಿಯಬೇಕು.

ಹೀಗೆ ಈ ಭಾಗ್ಯಬಡತನಗಳಿಂದೇರ್ಪಡುವ ಸುಖದುಃಖಗಳೆಂಬುವು ಅವನವನ ಮನೋಧರ್ಮಗಳಲ್ಲದೆ ವಸುಧರ್ಮಗಳಲ್ಲವೆಂಬ ಸಿದ್ಧಾಂತವನ್ನು ಮನನಕ್ಕೆ ತಂದು ಕೊಂಡು ಸದಾ ಶಾಂತಮನಸ್ಕನಾಗಿ ಪ್ರವರ್ತಿಸುವನಿಗೆ ಸರ್ವವು ಸುಖಮಯವಾಗಿಯೇ ಇರುವುದು.

" ಸರ್ವಂ ಸುಖಮಯಂ ತಸ್ಯ ಸಂತೃಪ್ತಂ ಯಸ್ಯಮಾನಸಂ |
ಉಪಾನದ್ಗೂಢಪಾದಸ್ಯ ನನು ಚರ್ಮಾಸ್ತೃತೇವಭೂಃ ||"

" (ಯಾವನ ಮನಸ್ಸು ತೃಪ್ತಿಪಟ್ಟಿರುವುದೋ ಅವನಿಗೆಲ್ಲವೂ ಸುಖರೂಪವೇ ಆಗಿರುವುದು. ಚರ್ಮದ ಎಕ್ಕಡವನ್ನು ತೊಟ್ಟು ನಡೆವವನಿಗೆ ನೆಲವೆಲ್ಲವು ಚರ್ಮಮಯ ವಾಗಿಯೇ ಕಾಣಬರುವುದಲ್ಲವೆ?)

ಆ ಮನಸ್ತೃಪ್ತಿಯೊಂದಿಲ್ಲಗೆ ಕೋಟಿ ಧನವಿದ್ದರೂ ಅದು ಸುಖದ ಕೂಟವೆ ನಿಸದೆ ಅವನ ಭಾಗಕ್ಕೆ ಆ ಧನವು ಕಾಟವಾಗಿಯೇ ಇರುವುದು. ಆದರಿಂದ ಧನದ ಹೆಚ್ಚು, ಕುಂದು ಇವುಗಳಿಂದುಂಟಾಗುವ ಸುಖದುಃಖಗಳು ಹೇಯಗಳಾದುವು. ಎಂದೂ ; ಧರ್ಮದ ಹೆಚ್ಚು ಕುಂದುಗಳಿಂದುಂಟಾಗುವ ಸುಖದುಃಖಗಳು ಮುಂದು ಮುಂದಿನ ಲೋಕಯಾತ್ರೆಗೆ ಆತ್ಮಸಹಾಯಕಗಳಾಗುವುದರಿಂದ ಉಪಾದೇಯಗಳು ಎಂದೂ; ತಿಳಿದು ಧರ್ಮದ ಭಾಗ್ಯವನ್ನು ಪಡೆಯುವುದಕ್ಕೆ ಯತ್ನಿಸುವುದೇ ಉತ್ತಮವು.

ಇನ್ನು ಇಲ್ಲಿ ಐಹಿಕವಾದ ಆಹಾರನಿದ್ರಾದಿ ಶಾರೀರ ಸುಖಾಂಶದಲ್ಲಿ ಬಡವ ಗಿಂತಲು ಭಾಗ್ಯವಂತಗೆ ಸುಖವಧಿಕವೆಂದು ಹೊರಗೆ ತೋರಿಬರಬಹುದು. ಆ ಭಾಗ್ಯ ವಂತರ ದೇಹಸುಖವೂ ಅನೇಕಜನ ಧನವಸ್ತುವಾಹನಾದಿ ಪದಾರ್ಥ ಬಾಹುಳ್ಯ ದಿಂದ ಏರ್ಪಡಬೇಕಾಗಿರುವುದರಿಂದ ಅದು ಅತ್ಯಂತ ಸೋಪಾಧಿಕವು, ಪರಾಪೇಕ್ಷವೂ ಕ್ಷಣಭಂಗುರವೂ, ಆಗಿರುವುದಲ್ಲದೆ ಆ ಧನಿಕಗೆ ಪರಮಪ್ರಮತ್ತತೆಯನ್ನುಂಟುಮಾಡಿ ಪರಮಪುರುಷ ಚಿಂತನವನ್ನೇ ಮರಸಿಬಿಡುವುದು. ಸಾಧುವೆನಿಸಿದ ಈ ಬಡವನ ದೇಹವಾದರೋ ಸರ್ವಸುಲಭವೂ ಸ್ವಭಾವಸಿದ್ಧವೂ ಆದಂತಹ ನೆಲ ನೀರು ನೆರಳು ಗಾಳಿ ಬೆಳಕು ಮಳೆ ಮುಂತಾದುದರಿಂದಲು ; ಕಾಳು ಕಡಿ ಹಣ್ಣು ಕಾಯಿ ಮುಂ ತಾದ ಅಲ್ಪವಸ್ತುಗಳಿಂದಲು ; ಹೆಂಡಿರು ಮಕ್ಕಳು ಮುಂತಾದ ಬಡತನದಲ್ಲಿ ಸ್ವಸಮಾ ನವಾದ ಅಲ್ಪಪರಿವಾರದಿಂದಲು; ಏರ್ಪಡುವುದರಿಂದ ನಿರುಪಾಧಿಕವು, ಬಹಳಮಟ್ಟಿಗೆ ಪರಜನ ಧನಾಪೇಕ್ಷೆಯಿಲ್ಲದುದು ಎಲ್ಲೆಲ್ಲಿಯು ಯಾವಾಗಲು ಸುಲಭವಾಗಿಯೇ ದೊರೆಯಬಹುದಾದುದಾಗಿದೆ. ಈ ದರಿದ್ರದಶೆಯೇ ಭಗವನ್ಮಹಿಮೆಯನ್ನು ಮನಕ್ಕೆ

ನೆನವುಗೊಟ್ಟು ಎಚ್ಚರಗೊಳಿಸುವುದಾಗಿದೆ. ಹೀಗಿದ್ದರೂ ಇದರಲ್ಲಿ ಇನ್ನೊಂದು ವಿಶೇಷವುಂಟು:—

ಬಡವನು ತಾನು ತನ್ನ ಜನ್ಮಕರ್ಮಗಳ ಯೋಗ್ಯತಾನುಸಾರವಾಗಿ ತನಗೆ ಇದ್ದುದರಲ್ಲಿ ತೃಪ್ತಿಪಟ್ಟುಕೊಂಡಿರದೆ ಯಾವುದೋ ಒಂದು ದುರ್ಧ್ಯೇಯಧನಾಭಿಮಾನವನ್ನು ಮನದಲ್ಲಿರಿಸಿಕೊಂಡು ವ್ಯಸನಿಯಾಗಿ ಮನಸ್ತೃಪ್ತಿಯಿಲ್ಲದೆ ತನಗೆ ಅಶಕ್ಯವಾದಂತಹ ಭಾಗ್ಯವಂತರ ಸುಖದ ಬಯಕೆಗೊಳಗಾದನೆಂದರೆ ಬರುತ್ತ ಬರುತ್ತ ಇನ್ನೂ ಕೆಳಗಣ ಗತಿಗೆ ಬಂದು ಬೇಗನೆ ಕೆಡುವನು. ಭಾಗ್ಯವಂತನು ತನ್ನ ಸ್ಥಿತಿಗತಿಯಿದುವೊಂದೂ ಶಾಶ್ವತವಲ್ಲವೆಂದು ಚಿತ್ತದಲ್ಲಿ ಎಚ್ಚರುಗೊಂಡು ಸಾಧುಗಳಾದ ಬಡವರ ಸಾತ್ವಿಕಸುಖವನ್ನು ಬಯಸಿ ಅವರಂತೆಯೇ ಶೀತೋಷ್ಣಾದಿ ದ್ವಂದ್ವಶ್ರಮವನ್ನು ಸಹನಮಾಡುವ ಅಭ್ಯಾಸಮಾಡುತ್ತ, ತನಗೆ ಪ್ರಾಪ್ತವಾಗಿರುವ ಸಂಪದವೆಲ್ಲವೂ ಪರರ ಪೋಷಣಾರ್ಥವಾಗಿ ದೇವರಿಂದ ದತ್ತವಾಗಿದೆಯೆಂಬ ಭಾವನೆಯಿಂದ ಸಾಧುಗಳಾದ ದೀನಾನಾಥವಿಪನ್ನರನ್ನು ಸಲಹುತ್ತ, ಸ್ವಾರ್ಥಪರತೆಯನ್ನು ಸ್ವಲ್ಪಸ್ವಲ್ಪವಾಗಿ ಬಿಡುವ ಅಭ್ಯಾಸಮಾಡುತ್ತ ಬಂದನೆಂದರೆ ಅಂತಹ ಭಾಗ್ಯವಂತನು ಬಲುಬೇಗನೆ ಇಹಪರಗಳೆರಡರಲ್ಲಿಯೂ, ಮೇಲೆಮೇಲಣ ಉತ್ತಮ ತರಗತಿಗೆ ಬಂದು ಸೇರುವನೆಂಬ ಸನಾತನಾರ್ಯಧರ್ಮ ಸಿದ್ಧಾಂತರಹಸ್ಯದ ಈ ವಿಶೇಷಾಂಶವನ್ನು ಯಾರೂ ಮರೆಯಬಾರದು. ಇದೇ ಸರ್ವಾಶ್ರಮಧರ್ಮಗಳ ಸಾರಾಂಶವೂ ಆಗಿದೆ. ಆದರಿಂದ ಮುಖ್ಯವಾಗಿ ನಾವಿಲ್ಲಿ ನಡೆಯಿಸುವ ಧರ್ಮಾಧರ್ಮಗಳೂ (ಪುಣ್ಯಪಾಪ), ನಾವನುಭವಿಸುವ ಭಾಗ್ಯ ಬಡತನಗಳ ಸುಖದುಃಖಗಳೆಲ್ಲವೂ, ಇಹಪರಗಳೆರಡಕ್ಕೂ ಸಂಬಂಧಿಸಿಯೇ ಇರುವುವಲ್ಲದೆ ಕೇವಲೈಹಿಕವೊಂದಕ್ಕೇ ಸೇರಿರುವುವೆಂದು ತಿಳಿಯಕೂಡದು.

೧೩ ಶಿ—ಇಲ್ಲಿ ನಮಗೆ ಸ್ವಲ್ಪ ಸಂದೇಹವಿದೆ, ಅದಕ್ಕೂ ಉತ್ತರವಾಗಬೇಕು:—ಇಲ್ಲಿ ಕೆಲವರೀಗ ಇಷ್ಟು ಪಾಪಕರ್ಮಪರರಾಗಿದ್ದರೂ ತಪ್ಪದೆ ಭಾಗ್ಯಸುಖಾನುಭವವನ್ನೇ ಮಾಡುತ್ತಿದ್ದಾರೆ. ಮತ್ತೆ ಕೆಲವರು ಎಷ್ಟೋ ಪುಣ್ಯತಪಃ ಕರ್ಮಪರರಾಗಿದ್ದರೂ ದಾರಿದ್ರ್ಯರೋಗಾದಿ ದುಃಖದಲ್ಲಿದ್ದಾರೆ. ಇನ್ನೂ ಕೆಲವರು ಸ್ವಲ್ಪಕಾಲ ಭಾಗ್ಯದಿಂದಲೂ, ಸ್ವಲ್ಪಕಾಲ ಬಡತನದಿಂದಲೂ, ಇರುತ್ತಾರೆ. ಹೀಗೆ ವ್ಯತ್ಯಸ್ತವಾಗಿಯೇ ಎಲ್ಲಾ ದೇಶದಲ್ಲಿಯೂ ಎಲ್ಲಾ ಜಾತಿಯಲ್ಲಿಯೂ ಕಾಣಬರುವುದರಿಂದ ಈ ಸುಖದುಃಖಕ್ಕೂ ಈ ಪುಣ್ಯಪಾಪಕ್ಕೂ ಕಾರ್ಯಕಾರಣಭಾವವಿದ್ದಂತೆ ತೋರಿಬರಲಿಲ್ಲವಲ್ಲಾ ? ಹೇಗೆ ?

ಉ—ಹಾ! ಹಾಗೆನ್ನಕೂಡದು. ಧರ್ಮಾಧರ್ಮಗಳು ಅತೀಂದ್ರಿಯಗಳಾಗಿ ಕಾರ್ಯದಿಂದಲೇ ಅನುಮೇಯಗಳಾಗಿ ಶಾಸ್ತ್ರಸಿದ್ಧಗಳಾಗಿವೆಯಲ್ಲವೆ? ಇದು ಕರ್ಮಭೂಮಿಯಾಗಿರುವುದರಿಂದ ಹಿಂದಿನ ಕರ್ಮದ ಅನುಭವಾರ್ಥವಾಗಿಯು, ಮುಂದಕ್ಕೆ ಸ್ವೇಷ್ಟಾರ್ಥಸಾಧನಾರ್ಥವಾಗಿಯು, ಪ್ರಾಣಿಗಳಲ್ಲಿ ಜನಿಸಿರುವುದರಿಂದ ತತ್ತತ್ಕರ್ಮಾನುರೂಪವಾಗಿಯೇ ಫಲವನ್ನು ಪಡೆಯುತ್ತಿದ್ದಾರೆ. ಈ ಯರ್ಥದಲ್ಲಿ ಲೇಶವೂ ಸಂಶಯಪಡ ಕೆಲಸವಿಲ್ಲ. ಹಿಂದೆ ಹೇಳಿರುವ ಕರ್ಮಪ್ರಶ್ನೆಗಳಲ್ಲಿ ಹೇಳಿರುವ ಕಾರ್ಯಕಾರಣಭಾವನ್ನೈಯತ್ಯದ ಸ್ವರೂಪವನ್ನು (ಪ. ೮೭) ಮತ್ತೊಂದುವೇಳೆ ಮನನಮಾಡಿರಿ. ಕ್ರಿಯಾಮಾತ್ರವೂ ಕ್ಷಣಿಕವು. ಒಂದು ಕ್ರಿಯೆ ಮತ್ತೊಂದನ್ನುಂಟುಮಾಡುವುದು, ಅದು ಇನ್ನೊಂದನ್ನು, ಹೀಗೆ ಉತ್ತರೋತ್ತರ ಕ್ರಿಯೆಗಳಿಗೆ ತತ್ಪೂರ್ವಪೂರ್ವಕ್ರಿಯೆಗಳು ಕಾರಣಗಳಾಗಿ ಇದ್ದೇ ಇರುವುವು. ಅಕಾರಣವಾಗಿ ಯಾವುದೊಂದು ವ್ಯಾಪಾರವೂ ನಡೆಯದು. ಅದರಿಂದ ಮುಂದಣ ಕರ್ಮಕ್ಕೆ ಹಿಂದಣದು ಕಾರಣರೂಪವು, ಹಿಂದಣ ಕರ್ಮಕ್ಕೆ ಮುಂದಣದು ಕಾರ್ಯ (ಫಲ) ರೂಪವು, ಆದನೇಲೆ ಈಗ ನಾವನುಭವಿಸುವ ಸುಖದುಃಖಗಳಿಗೆ ಹಿಂದೆ ನಮ್ಮಿಂದಲೇ ಅವಕ್ಕೆ ತಕ್ಕಷ್ಟು ಮಟ್ಟಿಗೆ ಧರ್ಮಾಧರ್ಮಗಳು ನಡದೇ ಇವೆ. ಈಗ ನಾವಿಲ್ಲಿ ನಡೆಯಿಸುವ ಕರ್ಮಗಳು (ಧರ್ಮಾಧರ್ಮಗಳು) ಇಲ್ಲಿಂದ ಮುಂದಕ್ಕೆ ಅನುಭವಿಸಬೇಕಾದ ಸುಖದುಃಖಗಳಿಗೆ ಹೇತುಗಳಾಗೇರ್ಪಡುತ್ತಿವೆ. ಈ ಚಕ್ರವು ಸದಾಕಾಲವು ಸುತ್ತುತ್ತ ಅವಿಚ್ಛಿನ್ನವಾಗಿರುವುದರಿಂದಲೇ ಶಾಸ್ತ್ರಕಾರರು ಕರ್ಮವನ್ನು ಅನಾದಿಪ್ರವಾಹರೂಪ ಎಂದು ಹೇಳುತ್ತ ಅಂತ-ಕೊನೆ-ನಾಶವುಳ್ಳುದಾದುದರಿಂದ ಭಗವದನುಗ್ರಹವುಂಟಾಯಿತೆಂದರೆ ಅದು ಛಿನ್ನಿತಬೀಜದಂತೆ ಮುಂದಕ್ಕೆ ಅಂಕುರಿಸದೆ ನಷ್ಟವಾಗುವುದು. ಬಳಿಕ ಸ್ವರೂಪಾನಂದರೂಪ ಮೋಕ್ಷವುಂಟಾಗುದೆನ್ನುವರು.

೧೪. ಅ—ಆದರೆ ಇದೇನೋ ಗಹನವಾಗಿದೆಯಲ್ಲ? ಇಹಪರ ಎಂದು ಎರಡನ್ನು ಹೇಳುವಿರಿ. ಈ ಇಹಪರಗಳು ಇಲ್ಲಿಯೇ ಇವೆಯೆಂದೂ ಹೇಳಿದಿರಿ. ಈಗ ನಾವೇನು ಪಾಪಿಗಳೊ? ಪುಣ್ಯವಂತರೋ? ಈ ಪುಣ್ಯಪಾಪಗಳ ತರಗತಿಗಳಲ್ಲಿ ಯಾವುದಕ್ಕೆ ಸೇರಿರುವೆವೆಂಬುದನ್ನು ತಿಳಿವುದು ಹೇಗೆ?

ಉ—ಅಯ್ಯಾ ಕೇಳು. ಈಗಿಲ್ಲಿ ಯಾವಪ್ರಾಣಿ ಎಂತಹ ಸುಖದುಃಖಗಳನ್ನು ಎಷ್ಟೆಷ್ಟು ಅನುಭವಿಸುತ್ತಿದ್ದಾನೆಯೋ ಅದದಕ್ಕೆ ತಕ್ಕಷ್ಟು ಅವನವನು ಆಯಾ ಶುಭಾಶುಭ ಸೂಚನೆಗಳಿಂದಲೇ ಅವನವನು ಮಾಡಿದ ಸತ್ಕರ್ಮ ದುಷ್ಕರ್ಮಗಳನ್ನು ಊಹಿಸಿಕೊಂಡು ಕರ್ಮವಿಪಾಕಾದಿ ಧರ್ಮಶಾಸ್ತ್ರ ಸಾಹ್ಯದಿಂದಲೂ; ನ್ಯಾಯಾನ್ಯಾಯವಿಮರ್ಶ

ನದ ಲೌಕಿಕಕುಶಲ ಬುದ್ಧಿಯಿಂದಲೂ; ತಾನು ಇಷ್ಟುಮಟ್ಟಿನ ಪುಣ್ಯವಂತನು, ಇಷ್ಟುಮಟ್ಟಿನ ಪಾಪಿಯೆಂದು ತನಗೆ ತಾನೇ ತಿಳಿದುಕೊಳ್ಳಬೇಕಲ್ಲದೆ ಲೋಕದಲ್ಲಿ ಪ್ರಾಣಿಗಳು ಅಂತರಂಗದಲ್ಲಿ ಅನುಭವಿಸುತ್ತಿರುವ ಮಾನಸಿಕ ಕಾಯಿಕ ವೇದನೆಗಳನ್ನು (ಸುಖ ದುಃಖ) ಪರರು ಹೇಳಲಾಗುವುದಿಲ್ಲ. ಆದರೆ ಬಹಿರಂಗವಾದ ದುರ್ವೃತ್ತಸದ್ವೃತ್ತಿಗಳಿಂದ ಜನರು ಪಾಪಪುಣ್ಯಗಳನ್ನೂಹಿಸುವರು. ಈ ವಿಷಯದಲ್ಲಿ ಜನಸಾಮಾನ್ಯದಲ್ಲಿ ಕಾಣಬರುವ ಧರ್ಮಾಧರ್ಮಫಲಗಳು ನಾಲ್ಕು ತೆರನಾಗಿ ತಿಳಿಯಬೇಕೆಂದು ಭಾರತ ವನಪರ್ವದಲ್ಲಿ ಯುಧಿಷ್ಠಿರ ಮಾರ್ಕಂಡೇಯ ಸಂವಾದದಲ್ಲಿ (ಅ ೧೮೭) ಹೇಳಿದೆ.

ಶ್ಲೋ॥ "ಇಹವೈಕಸ್ಯ ನಾಮುತ್ರ ಅಮುತ್ರೈಕಸ್ಯ ನೋ ಇಹ ।
ಇಹಚಾಮುತ್ರ ಚೈಕಸ್ಯ ನಾಮುತ್ರೈಕಸ್ಯ ನೋ ಇಹ ॥"

(ಸುಖಾನುಭವವು-ಕೆಲವರಿಗೆ ಇಲ್ಲಿಯೇ ಉಂಟು, ಪರದಲ್ಲಿ ದೊರೆಯದು; ಮತ್ತೆ ಕೆಲವರಿಗೆ ಪರದಲ್ಲಿಯೇ ದೊರೆಯುವುದು, ಇಲ್ಲಿ ಇಲ್ಲ. ಇನ್ನು ಕೆಲವರಿಗೆ ಇಹದಲ್ಲಿಯೂ ಪರದಲ್ಲಿಯೂ ಸಮಾನವಾಗಿಯೇ ಸುಖವು ದೊರೆಯುವುದು. ಈ ಮೂರು ತರಗತಿಗೂ ಸೇರದ ಜನರಿಗೆ ಇಹದಲ್ಲಿಯೂ ಸುಖವಿಲ್ಲ, ಪರದಲ್ಲಿಯೂ ಸುಖವಿಲ್ಲ) ಎಂದು ಹೇಳಿ, ವರ್ಣಾಶ್ರಮಧರ್ಮಗಳಲ್ಲಿ ಪ್ರವೃತ್ತರಾಗಿ ಪೂರ್ವಕರ್ಮಪ್ರವಾಹಕ್ಕೆ ಸಿಕ್ಕಿ ತದ್ವಾಸನಾನುಸಾರವಾಗಿ ದೇಹಗಳನ್ನು ಪರಿಗ್ರಹಿಸಿ ತತ್ತದ್ಯೋಗ್ಯತಾನುರೂಪ ಕರ್ಮಗಳನ್ನು ಮಾಡುತ್ತ ಬರುವಾಗ ತತ್ತತ್ಸುಖದುಃಖಗಳು ಹೀಗೆ ನಾಲ್ಕು ತೆರನಾಗಿ ಲೋಕದಲ್ಲಿ ಕಾಣಬರುತ್ತಿವೆಯೆಂಬ ವಿಷಯದಲ್ಲಿ ನಾಲ್ಕು ಉದಾಹರಣಗಳನ್ನೂ ಹೇಳಿದ್ದಾರೆ.

(೧) "ಧನಾನಿ ಯೇಷಾಂ ವಿಪುಲಾನಿ ಸನ್ತಿ ।
ನಿತ್ಯಂ ರಮನ್ತೇ ಸುವಿಭೂಷಿತಾಂಗಾಃ ॥
ತೇಷಾಮಯುಂ ಶತ್ರುವರಘ್ನ ಲೋಕೋ ।
ನಾಸೌ ಸದಾ ಗ್ರಾಮ್ಯ ಸುಖೇ ರತಾನಾಮ್ ॥೩೭॥"

ಯಾರಿಗೆ ಅಧಿಕವಾಗಿ ದ್ರವ್ಯಸಂಪತ್ಸಮೃದ್ಧಿಯುಂಟೋ ಯಾರು ಉಡುಗೆ ತೊಡುಗೆಗಳಿಂದ ಅಲಂಕೃತರಾಗಿ ನಿತ್ಯವು ಬೇಕುಬೇಕಾದ ವಿನೋದವಿಹಾರಗಳನ್ನು ನಡೆಯಿಸುತ್ತ ಯಾವಾಗಲು ಗ್ರಾಮ್ಯಧರ್ಮವೆಂಬ ದೇಹಸೌಖ್ಯದಲ್ಲಿಯೇ ಆಸಕ್ತರಾಗಿರುವರೋ ಅಂತಹವರಿಗೆ ಈ ಲೋಕವೊಂದೇ ಸರಿ. ಮುಂದಕ್ಕೆ ಪರಲೋಕಸುಖಗತಿಯಿಲ್ಲವು. ಇವರು ಪೂರ್ವಪುಣ್ಯದ ಫಲವನ್ನು ಅನುಭವಿಸಲು ಬಂದ ಭೋಗಿಗಳು

ರಾಜಸತಾಮಸ ಸುಖಾಭಿಲಾಷಿಗಳಾಗಿ ವೃಕ್ಷಧರ್ಮದಂತೆ ಸಂತಾನವೃದ್ಧಿ ಮಾಡುತ್ತಿರುವರು.

(೨) " ಯೇ ಯೋಗಯುಕ್ತಾ ಸ್ತಪಸಿ ಪ್ರಸಕ್ತಾಃ |
ಸ್ವಾಧ್ಯಾಯ ಶೀಲಾ ಜರಯನ್ತಿ ದೇಹಾನ್ ‖
ಜಿತೇಂದ್ರಿಯಾಃ ಭೂತಹಿತೇನಿವಿಷ್ಟಾಃ |
ತೇಷಾ ಮಸ ನಾಯ ಮರಿಷ್ಟ ಲೋಕಃ ‖೪೮‖ "

ಯಾರು ತಪಸ್ಸಿನಲ್ಲಿ ಅತ್ಯಾಸಕ್ತರಾಗಿ ಯೋಗಾಭ್ಯಾಸವನ್ನು ಮಾಡುತ್ತ, ವೇದಶಾಸ್ತ್ರಾಭ್ಯಾಸವೇ ಸ್ವಭಾವವಾಗುಳ್ಳವರಾಗುತ್ತ, ಸ್ವದೇಹವನ್ನು ಸವೆಯಿಸಿಕೊಳ್ಳುವರೋ; ಯಾರು ಯಾವಾಗಲು ಜಿತೇಂದ್ರಿಯರಾಗಿರುವುದರಿಂದ ಯಾವುದೊಂದು ಪ್ರಾಣಿಹಿಂಸೆಗೂ ಒಳಗಾಗದೆ ಯಾವಾಗಲು ಸರ್ವಭೂತಗಳಲ್ಲಿಯು ದಯೆಗೆಯ್ಯುವರೋ; ಅಂತಹ ಮಹಾತ್ಮರಿಗೆ ಆಮುಷ್ಮಿಕಸುಖವೇ ಸುಖವಲ್ಲದೆ ಈ ಲೋಕದ ತುಚ್ಛಸುಖವು ಅವರಿಗಿಲ್ಲ. ಇವರೇ ಕರ್ಮಫಲತ್ಯಾಗಿಗಳಾದ ಯೋಗಿಗಳು, ಜ್ಞಾನಿಗಳು, ಮಹಾತ್ಮರೆನಿಸಿಕೊಂಡಿರುವ ಶುದ್ಧಸಾತ್ವಿಕಜೀವರು; ರಾಜಸ ಸುಖವನ್ನು ಬಯಸದವರು; ಪರಮಾತ್ಮಾನುಗ್ರಹಪಾತ್ರರು.

(೩) " ಯೇ ಧರ್ಮಮೇವ ಪ್ರಥಮಂ ಚರನ್ತಿ |
ಧರ್ಮೇಣ ಲಬ್ಧ್ವಾ ಚ ಧನಾನಿ ಕಾಲೇ ‖
ದಾರಾ ನವಾಪ್ಯ ಕ್ರತುಭಿ ರ್ಯಜನ್ತೇ |
ತೇಷಾ ಮಯಂ ಚೈವ ಪರಶ್ಚ ಲೋಕಃ ‖೪೯‖ "

ಯಾರು ಮೊದಲಿಂದಲು ಬ್ರಹ್ಮಚರ್ಯಾದಿಧರ್ಮವನ್ನೇ ಆಚರಿಸುವರೋ, ಬಳಿಕ ನ್ಯಾಯಮಾರ್ಗದಿಂದ ಧನವನ್ನು ಪಡೆದು ಸಕಾಲದಲ್ಲಿ ಮದುವೆಯಾಗಿ ಯಜ್ಞಾದಿಕರ್ಮಗಳಿಂದ ದೇವಪೂಜೆಯನ್ನು ಮಾಡುವರೋ, ಅಂತಹವರಿಗೆ ಈ ಲೋಕಸುಖವೂ, ಪರಲೋಕಸುಖವೂ ಕೂಡ ದೊರೆಯುವುದು. ಇವರೇ ಸ್ವಧರ್ಮಪರರಾದ ಸದ್ಗೃಹಸ್ಥರು, ಕರ್ಮಯೋಗಿಗಳು, ಸಾತ್ವಿಕರು. ಭಗವದಿಚ್ಛಾನುರೂಪವಾಗಿ ನಡೆಯುತ್ತಿರುವ ಈ ಜಗತ್ಪಾಲನಕಾರ್ಯಕ್ಕೆ ಅನುಕೂಲವಾದ ವ್ಯಾಪಾರಗಳನ್ನು ನಡೆಯಿಸುತ್ತ ಲೋಕೋಪಕಾರಮಾಡುತ್ತಿರುವುದರಿಂದ ಇಂತಹವರೆಲ್ಲರೂ ಭಗವದ್ಭಕ್ತರಲ್ಲಿ ಗಣ್ಯರಾದವರು. ನಾಲ್ಕನೆಯ ತರಗತಿಯವರು ಮಾತ್ರ ಲೋಕಾಪಕಾರಿಗಳಾಗಿ ಸದಾಸುರಭಾವದಿಂದಲೇ ಪ್ರವರ್ತಿಸುತ್ತಿರುವುದರಿಂದ ನಾಸ್ತಿಕರು ತಮೋಯೋಗ್ಯರೆನಿಸಿಕೊಂಡಿರುವರು.

ಇವರ ವರ್ಣನೆಯು ಬಹುವಾಗಿದ್ದರೂ ಉದಾಹರಣಕ್ಕಿಲ್ಲಿ ಒಂದನ್ನು ಹೇಳುವೆನು. ಎಂತೆನೆ:—

(೪) "ಯೇಷ್ನೈವವಿದ್ಯಾಂ ನ ತಪೋ ನದಾನಂ |
ನಚಾಪಿ ಮೂಢಾಃ ಪ್ರಜನೇ ಯತಂತೇ ||
ನಚಾಪಿ ಗಚ್ಛಂತಿ ಶುಭಾನ್ಯಭಾಗ್ಯಾಃ |
ತೇಷಾಮಯಂ ನೈವ ಪರಶ್ಚ ಲೋಕಃ ||೪೦||"

ಯಾರಾದರೆ ವಿದ್ಯೆಯನ್ನು ಕಲಿಯರೋ, ವೈದಿಕ ಲೌಕಿಕೋಭಯ ಕರ್ಮವನ್ನೂ ಮಾಡರೋ, ಯಾರಿಗೇನೊಂದು ದಾನವನ್ನೂ ಕೊಡರೋ ಎಂದರೆ ಲೋಕೋಪಕಾರಲೇಶವೂ ಇಲ್ಲದವರೋ, ಆದರೆ ಶುದ್ಧಮುಗ್ಧರಲ್ಲದೆ ಲೋಕದಲ್ಲಿ ಮಾರ್ಜಾಲಶ್ವಾನಸೂಕರಾದಿಗಳಂತೆ ಸ್ವೋದರಪೂರಣ ಗರ್ಭಗ್ರಹಣಾದಿಗಳಲ್ಲಿ ಮಾತ್ರ ಪ್ರವರ್ತಿಸುತ್ತ ಸದಾ ಗ್ರಾಮ್ಯಧರ್ಮತತ್ಪರರಾಗಿರುವರೋ, ಯಾರಾದರೆ ಶುಭವಾದಕಾರ್ಯಗಳೊಂದನ್ನೂ ಮಾಡದವರೋ, ಅಂತಹ ಅಭಾಗ್ಯರಿಗೆ (ಮಹಾಪಾಪಿಷ್ಠರಿಗೆ) ಈ ಲೋಕದ ಸುಖವೂ ಇಲ್ಲ; ಪರದ ಸದ್ಗತಿಯಂತೂ ಇಲ್ಲವೇ ಇಲ್ಲವೆಂದೂ ಅವರು ಭೂಭಾರಭೂತರೆಂದೂ, ಉಭಯಭ್ರಷ್ಟರೆಂದೂ, ಸ್ಪಷ್ಟವಾಗಿ ಹೇಳಿದೆ. ಅದರಿಂದಿವರೇ ನಾಸ್ತಿಕರಾದ ದೈತ್ಯರು, ಭಗವದ್ವಿರೋಧಿಗಳು.

ಹೀಗಿರುವುದರಿಂದ ಪುಣ್ಯಾಪುಣ್ಯ ಫಲಗಳೆನಿಸಿರುವ ಚಿರಸ್ಥಿರ ಸುಖದುಃಖಗಳನ್ನು ಕೇವಲ ತಾತ್ಕಾಲಿಕಗಳನ್ನಾಗಿ ತಿಳಿಯದೆ ಚಿರಾನುಭವದಿಂದ ಉಭಯಲೋಕಗಳಿಗೂ ಸಂಬಂಧಿಸಿವೆಯೆಂದು ತಿಳಿದುಕೊಂಡು ಅವನವನು ಸ್ವಸ್ವಕೃತಕರ್ಮಗಳಿಗೆ ಫಲರೂಪವಾಗಿ ಪ್ರಾಪ್ತವಾಗುವ ಭಾಗ್ಯ ಬಡತನ, ರೋಗ ಆರೋಗ್ಯ, ಅಲ್ಪಾಯುಸ್ಸು ಪೂರ್ಣಾಯುಸ್ಸು, ಸುಕೀರ್ತ್ಯಪಕೀರ್ತಿ, ಸೌಜನ್ಯ ದೌರ್ಜನ್ಯ, ಸದ್ಗತಿ ದುರ್ಗತಿ, ಇತ್ಯಾದಿ ದ್ವಂದ್ವಗಳನ್ನು ಅನುಭವಿಸುವಾಗ ತಾನು ಎಷ್ಟು ಪುಣ್ಯವಂತನೋ ಎಷ್ಟು ಪಾಪಿಯೋ ಎಂಬುದನ್ನು ಅವನವನೇ ನಿರ್ಧರಿಸಿಕೊಳ್ಳಬೇಕು. ಇದರ ನಿರ್ಧಾರಣಕ್ಕೆ ಮತ್ತೊಂದು ವಿಮರ್ಶನೀಯ ವಿಷಯವೂ ಉಂಟು:--ಹಿಂದೆ ಹೇಳಿದ ಶುದ್ಧಸಾತ್ವಿಕ ಶುದ್ಧತಾಮಸ ಜೀವರ ಊರ್ಧ್ವಾಧೋಗತಿಗಳಿಗೆ ಸೂಚಕಗಳಾಗಿರುವ ದೈವಸಂಪತ್ತು ಆಸುರಸಂಪತ್ತುಗಳು. ಅವುಗಳ ಮೂಲವನ್ನು ತಿಳಿದು ಆ ಪ್ರಕಾರವಾಗಿಯೂ ಸ್ವಾತ್ಮಪರೀಕ್ಷೆಯನ್ನು ಮಾಡಿಕೊಂಡರೆ ತಾನು ಸುಕೃತಿ, ದುಷ್ಕೃತಿ, ಯೆಂಬುದು ತನಗೆ ತಾನೇ ಗೊತ್ತಾಗುವುದು.

೧೫. ಪ್ರ—ಆ ದೈವಾಸುರ ಸಂಪದ್ವಿಚಾರವು ಎಲ್ಲಿ ಹೇಳಿದೆ? ಅದನ್ನೂ ಸ್ವಲ್ಪ ವಿವರಿಸಬೇಕು.

ಉ—'ದೈವಾಸುರಸಂಪದ್ವಿಭಾಗಯೋಗ' ಎಂದು ಒಂದು ಅಧ್ಯಾಯವೆಲ್ಲವು ಇದೇ ವಿಷಯವನ್ನೇ ಹೇಳಿದೆ. (ಭಗವದ್ಗೀತೆ ೧೬ನೆಯ ಅಧ್ಯಾಯವು)

"ಅಭಯಂ ಸತ್ತ್ವಸಂಶುದ್ಧಿ ಜ್ಞಾನಯೋಗ ವ್ಯವಸ್ಥಿತಿಃ |
ದಾನಂ ದಮಶ್ಚ ಯಜ್ಞಶ್ಚ ಸ್ವಾಧ್ಯಾಯ ಸ್ತಪ ಆರ್ಜವಮ್ ||೧||
ಅಹಿಂಸಾ ಸತ್ಯ ಮಕ್ರೋಧ ಸ್ತ್ಯಾಗ ಶ್ಶಾನ್ತಿರಪೈಶುನಮ್ |
ದಯಾ ಭೂತೇ ಷ್ವಲೋಲುತ್ವಂ ಮಾರ್ದವಂ ಹ್ರೀರಚಾಪಲಮ್ ||೨||
ತೇಜಃ ಕ್ಷಮಾ ಧೃತಿಃಶೌಚಮದ್ರೋಹೋ ನಾತಿಮಾನಿತಾ |
ಭವನ್ತಿ ಸಮ್ಪದಂ ದೈವೀಮಭಿಜಾತಸ್ಯ ಭಾರತ ||೩||"

ಸಾತ್ವಿಕವಾದ ದೇವಸಂಪತ್ತನ್ನು ಹೊಂದಿರುವವರ ಗುಣಗಳು ಆವುವೆಂದರೆ:- ಏನು ಕಷ್ಟವೊದಗಿದರೂ ಭಯಪಡದಿರುವುದು, ಚಿತ್ತಶುದ್ಧಿ-ಅಸೂಯಾದಿಗಳಿಲ್ಲದ ಮನದ ನೈರ್ಮಲ್ಯವು, ಜ್ಞಾನೋಪಾಯದಲ್ಲಿ ಆಸಕ್ತಿ, ಸುಪಾತ್ರದಲ್ಲಿ ದ್ರವ್ಯವನ್ನು ಕೊಡುವುದು, ಇಂದ್ರಿಯಗಳ ವೇಗವನ್ನು ತಡೆಯುವುದು, ಯಜ್ಞ-ದೇವಪೂಜಾದಿಗಳು, ವೇದಶಾಸ್ತ್ರಾಧ್ಯಯನ, ತಪಸ್ಸು-ಬ್ರಹ್ಮಚರ್ಯಾದಿವ್ರತಾನುಷ್ಠಾನ, ಋಜುತ್ವ-ಮನೋವಾಕ್ಕಾಯಕರ್ಮಗಳಲ್ಲಿ ಏಕರೂಪತ್ವವು ||೧|| ಪರರಿಗೆ ಬಾಧೆಗೆಯ್ಯದಿರುವುದು, ಯಥಾರ್ಥವಚನ, ಕೋಪಮಾಡಿಕೊಳ್ಳದಿರುವುದು, ಔದಾರ್ಯವು, ಸೈರಣೆ, ಪರದೋಷಗಳನ್ನು ಹೇಳದಿರುವುದು, ಭೂತಗಳಲ್ಲಿ ದಯೆ, ವಿಷಯಗಳಲ್ಲಿ ಅತ್ಯಾಸಕ್ತಿಯಿಲ್ಲದಿರುವುದು, ಮೃದುತ್ವ-ಕ್ರೂರನಾಗದಿರುವುದು, ಅಕಾರ್ಯದಲ್ಲಿ ನಾಚಿಕೆ, ಚಾಂಚಲ್ಯವನ್ನು ಬಿಟ್ಟಿರುವುದು ||೨|| ತೇಜಸ್ಸು-ಪರರಿಂದ ತಿರಸ್ಕಾರವನ್ನು ಪಡೆಯದಿರುವುದು, ಕ್ಷಮೆ-ಅಪಕಾರಿಗೆ ಪ್ರತ್ಯಪಕಾರಮಾಡದಿರುವುದು, ಧೃತಿ-ಯಾವುದರಲ್ಲಿಯೂ ಆತಂಕವಿಲ್ಲದಿರುವುದು, ಅಂತರ್ಬಹಿಶ್ಶುದ್ಧಿ, ಪರರಿಗೆ ಕೆಡಕನ್ನು ಎಣಿಸದಿರುವುದು, ಅತಿಯಾಗಿ ಅಹಂಕಾರಪಡದಿರುವುದು; ಇತ್ಯಾದಿ ಸದ್ಗುಣಗಳನ್ನೂ ತತ್ಕರ್ಮಗಳನ್ನೂ ಅಭ್ಯಾಸಮಾಡಿರುವನು ಪುಣ್ಯವಂತನು, ಸಾತ್ವಿಕನು, ಮುಂದಕ್ಕೆ ಸದ್ಗತಿಗೆ ಅರ್ಹನಾಗುವನು. ಇಹದಲ್ಲಿಯೂ ಉತ್ತಮಾಯುರಾರೋಗ್ಯಾದಿ ಸತ್ಸುಖದಿಂದ ಬಾಳುವನು.

ಇನ್ನು ರಾಜಸತಾಮಸಗಳೆನಿಸಿ ಅಸುರಸಂಪತ್ತಿಗೆ ಸೇರಿರುವವರ ಗುಣಗಳಾವುವೆಂದರೆ:—

ಶ್ಲೋ॥ “ದಂಭೋ ದರ್ಪೋಽಭಿಮಾನಶ್ಚ ಕ್ರೋಧಃ ಪಾರುಷ್ಯಮೇವಚ ।
ಅಜ್ಞಾನಂ ಚಾಭಿಜಾತಸ್ಯ ಪಾರ್ಥ ಸಮ್ಪದ ಮಾಸುರೀಮ್ ॥೪॥
... ... ... ... ... ... ... ... ... ... ... ...
ಪ್ರವೃತ್ತಿಂ ಚ ನಿವೃತ್ತಿಂ ಚ ಜನಾ ನ ವಿದುರಾ ಸುರಾಃ ।
ನ ಶೌಚಂ ನಾಪಿಚಾಚಾರೋ ನ ಸತ್ಯಂ ತೇಷು ವಿದ್ಯತೇ ॥೭॥”
... ... ... ... ... ... ... ... ... ... ... ...
“ಆಶಾಪಾಶ ಶತೈರ್ಬದ್ಧಾಃ ಕಾಮಕ್ರೋಧ ಪರಾಯಣಾಃ ।
ಈಹನ್ತೇ ಕಾಮಭೋಗಾರ್ಥ ಮನ್ಯಾಯೇನಾರ್ಥಸಞ್ಚಯಾನ್ ॥೧೨॥
ಇದಮದ್ಯ ಮಯಾಲಬ್ಧ ಮಿಮಂ ಪ್ರಾಪ್ಸ್ಯೇ ಮನೋರಥಮ್ ।
ಇದಮಸ್ತೀದ ಮಪಿಮೇ ಭವಿಷ್ಯತಿ ಪುನರ್ಧನಮ್ ॥೧೩॥
ಅಸೌ ಮಯಾ ಹತಃ ಶತ್ರು ರ್ಹನಿಷ್ಯೇ ಚಾಪರಾನಪಿ ।
ಈಶ್ವರೋಽಹಮಹಂಭೋಗೀ ಸಿದ್ಧೋಽಹಂ ಬಲವಾನ್ ಸುಖೀ ॥೧೪॥
ಆಢ್ಯೋಽಭಿಜನವಾನಸ್ಮಿ ಕೋಽನ್ಯೋಽಸ್ತಿ ಸದೃಶೋ ಮಯಾ ।
ಯಕ್ಷ್ಯೇ ದಾಸ್ಯಾಮಿ ಮೋದಿಷ್ಯ ಇತ್ಯಜ್ಞಾನ ವಿಮೋಹಿತಾಃ ॥೧೫॥
ಅನೇಕಚಿತ್ತ ವಿಭ್ರಾನ್ತಾ ಮೋಹಜಾಲ ಸಮಾವೃತಾಃ ।
ಪ್ರಸಕ್ತಾಃ ಕಾಮಭೋಗೇಷು ಪತಂತಿ ನರಕೇಽಶುಚೌ ॥೧೬॥”

“ದಂಭ–ಒಳಗೆ ತನ್ನ ಅಲ್ಪಶಕ್ತಿಜ್ಞಾನಾದಿಗಳು ತನಗೆ ತಿಳಿದಿದ್ದರೂ ಹೊರಗೆ ಮಾತ್ರ ಮಹತ್ತ್ವವನ್ನು ತೋರ್ಪಡಿಸಿಕೊಳ್ಳುವುದು; ದರ್ಪ–ಭಯಾದಿಕಾರಣವಿದ್ದರೂ ಮದದಿಂದ ತನಗೆ ಭಯಾದಿಗಳಿಲ್ಲವೆಂದು ನಟಿಸುವುದು, ಅಭಿಮಾನ–ಮಿತಿಮೀರಿದ ಅಹಂಭಾವವು, ಕ್ರೋಧ–ಪರರಿಗೆ ಪೀಡೆಯನ್ನುಂಟುಮಾಡುವ ಮನೋವೃತ್ತಿಯು, ಪಾರುಷ್ಯ–ನಿಷ್ಠುರತ್ವವು, ಅಜ್ಞಾನವು; ಇವೆಲ್ಲವೂ ಅಸುರಸಂಪದವುಳ್ಳವನ ಗುಣಗಳು ॥೪॥ ಈ ಗುಣವುಳ್ಳ ಜನರು ಶಾಸ್ತ್ರವಿಹಿತಕರ್ಮಗಳಲ್ಲಿ ಪ್ರವರ್ತಿಸರು; ಶಾಸ್ತ್ರನಿಷಿದ್ಧಕರ್ಮಗಳಲ್ಲಿ ಪ್ರವರ್ತಿಸದೇಯಿರರು; ಆ ವಿಧಿನಿಷೇಧಜ್ಞಾನವೇ ಇಲ್ಲದವರು; ಇವರಲ್ಲಿ ಶುಚಿತ್ವವಿಲ್ಲ, ಸದಾಚಾರವಿಲ್ಲ, ಯಥಾರ್ಥವೂ ಇಲ್ಲ ॥೭॥” “ಇವರು ಯಾವಾಗಲೂ ಅತ್ಯಾಶೆಯೆಂಬ ಹಗ್ಗಗಳಿಂದ ಕಟ್ಟಲ್ಪಟ್ಟವರಾಗಿಯೂ, ಕೆಟ್ಟ ಕಾಮಕ್ಕೂ ಕೆಟ್ಟ ಕೋಪಕ್ಕೂ ತವರುಮನೆಯಾದವರಾಗಿಯೂ, ಇಂದ್ರಿಯವಿಷಯಾನುಭವಾರ್ಥವಾಗಿಯೂ ಅನ್ಯಾಯದಿಂದ–ಅಧರ್ಮದಿಂದಲೇ–ದ್ರವ್ಯರಾಶಿಯನ್ನು ಪಡೆಯಲಪೇಕ್ಷಿಸುವರು ॥೧೨॥ ಈಗ ನಾನು ಇಷ್ಟು ಹಣವನ್ನು ಪಡೆದೆನು, ಇನ್ನೀ ಕೋರಿಕೆಯನ್ನೂ ನೆರವೇರಿಸಿಕೊಳ್ಳುವೆನು; ಈಗ ಇಷ್ಟು ಹಣವಿದೆ, ಇನ್ನಿಷ್ಟು ದ್ರವ್ಯವು ಬರು

ವುದು; ಈ ಹಗೆಗಳನ್ನು ಕೊಂದೆನು, ಇನ್ನೂ ಉಳಿದಿರುವ ಶತ್ರುಗಳನ್ನೂ ಧ್ವಂಸಮಾಡುವೆನು. ನಾನೇ ಇದೆಲ್ಲಕ್ಕೂ ಒಡೆಯನು, ನಾನೇ ಸುಖಿಯು, ನಾನೇ ಕೃತಾರ್ಥನು, ನಾನೇ ಬಲಿಷ್ಠನು, ನಾನೇ ಐಹಿಕಾಮುಷ್ಮಿಕ ಸುಖಸಂಪನ್ನನು ||೧೪|| " "ನಾನೇ ಅಧಿಕಧನವಂತನು, ಸತ್ಕುಲಪ್ರಸೂತನು, ನನಗೆ ಸಮಾನನು ಮತ್ತೊಬ್ಬನು ಯಾವನಿದ್ದಾನೆ? ನಾನು ಯಜ್ಞಮಾಡುವೆನು, ದಾನಮಾಡುವೆನು, ಮುಂದೆ ಇನ್ನೂ ಹೆಚ್ಚು ಸಂತೋಷವನ್ನು ಹೊಂದುವೆನು," ಎಂಬುದೇ ಮೊದಲಾದ ಅಜ್ಞಾನದಿಂದ ಮೋಹಿತರಾದವರು ||೧೫|| ಇನ್ನೂ ಹೀಗೆಯೇ ಅನೇಕವಿಧ ಚಿಂತೆಗಳಿಂದ ಕೂಡಿದ ಮನಸ್ಸಿನಿಂದ ಭ್ರಾಂತಿಪಟ್ಟವರಾಗಿ, ಪುತ್ರಮಿತ್ರಾದಿಗಳಲ್ಲಿ ಉಂಟಾದ ಮೋಹದ ಬಲೆಗೆ ಸಿಕ್ಕಿಕೊಂಡು, ಇಂದ್ರಿಯವಿಷಯ ಸುಖಗಳಲ್ಲಿ ಅತ್ಯಾಸಕ್ತರಾಗಿ, ಕಡೆಗೆ ಅತ್ಯಂತ ದುಃಖಕರವಾದ ನರಕದಲ್ಲಿ ಬೀಳುತ್ತಿದ್ದಾರೆ ||೧೬|| "

ಇತ್ಯಾದ್ಯಾಸುರಸಂಪತ್ತಿನ ಜೀವರು ಭಗವದ್ವಿರೋಧಿಗಳಾಗಿ ಅಂಧಂತಮಸ್ಸನ್ನು ಹೊಂದುವರು. ಇವರೇ ದೈತ್ಯರು. ಇವರ ಗುಣಗಳು, ತದಂಶಗಳು ಕೂಡ, ಯಾವ ಮನುಷ್ಯನಲ್ಲಿ ಯೆಷ್ಟೆಷ್ಟು ಇರುವುವೋ ಅವನು ಅಷ್ಟಷ್ಟು ಪಾಪಿಯೆನಿಸಿಕೊಂಡು ದುಃಖಭಾಗಿಯಾಗುವನು, ಎಂದಿರುವುದರಿಂದ ಬುದ್ಧಿಶಾಲಿಯಾದವನು ಸ್ವಬುದ್ಧಿಯಿಂದಲೇ ತನ್ನ ಗುಣಕರ್ಮಗಳನ್ನು ತಿಳಿದುಕೊಂಡು ತಾನು ಪಾಪಿ ಪುಣ್ಯವಂತ ಎಂಬುದನ್ನು ತನಗ್ಯೆತಾನೇ ನಿರ್ಧರಿಸಿಕೊಂಡು ಪಾಪಭೀತನಾಗಿ ದಿನದಿನಕ್ಕೆ ತತ್ಪಾಪಕೃತ್ಯದಿಂದ ನಿವೃತ್ತನಾಗುತ್ತ ಸುಖಿಸಬೇಕು. ಕ್ಷಣಿಕವಾದೀಭಾಗ್ಯಬಡತನಗಳನ್ನೇ ಚಿಂತಿಸುತ್ತ ಕುಳ್ಳಿರುವುದರಿಂದ ಫಲವೇನೂ ಕಾಣಬರುವುದಿಲ್ಲವು. ಆದರೆ ಸ್ವರೂಪಯೋಗ್ಯತಾವಿಚಾರದಲ್ಲಿ ಬಾಲ್ಯದಿಂದಲೂ ಅವನವನ ಮನಃಕಾರ್ಯವನ್ನು ಲಕ್ಷ್ಯವಿಡುತ್ತ ಬಂದರೆ ಕಾಮಕ್ರೋಧಲೋಭಾದಿ ದೈತ್ಯಭಾಗವು ಹೆಚ್ಚಿದೆಯೆ? ಅಹಿಂಸೆ ಅಸ್ತೇಯ ಬ್ರಹ್ಮಚರ್ಯ ಜ್ಞಾನಭಕ್ತಿ ವೈರಾಗ್ಯಾದಿ ಸಾತ್ವಿಕದೇವಭಾಗವು ಹೆಚ್ಚಿದೆಯೆ? ಎಂಬುದು ಚಿರಾನುಭವದಿಂದ ತನಗೆ ತಾನೇ ಪಾಪಿಜೀವ, ಪುಣ್ಯಜೀವ, ಅಥವಾ ತಾಮಸ, ಸಾತ್ವಿಕ, ಇತ್ಯಾದಿ ಸ್ವಸ್ವರೂಪಯೋಗ್ಯತಾದಿಗಳು ತಿಳಿಯಬಾರದಿರದು. "ಸ್ವಭಾವೋನಿಷ್ಕೃತಿಕ್ರಿಯಃ; ಸ್ವಭಾವೋನಾತಿರಿಚ್ಯತೇ" ಎಂದಿರುವುದರಿಂದ ಸರ್ವತ್ರ ಸರ್ವದಾ ಆ ಪುಣ್ಯಪಾಪಸ್ವರೂಪವು ಶೌರ್ಯದಿಂದಲೇ ವ್ಯಕ್ತವಾಗುವುದು. ಇದು ಪರರನ್ನು ಕೇಳಿ ತಿಳಿಯತಕ್ಕ ಅಂಶವಲ್ಲ. ಸ್ವಯಂ ತಿಳಿಯತಕ್ಕುದು.

೧೬. ಅ—ಹಿಂದೆ "ಅದಾನದೋಷೇಣಭವೇದ್ದರಿದ್ರಃ" ಎಂದು ಹೇಳಿದ್ದಿರಿ. ಈಗ ನಾವಾದಾರಿದ್ರ್ಯವನ್ನು ಕಳೆದುಕೊಳ್ಳಬೇಕಾದರೆ ದಾನಮಾಡಬೇಕಷ್ಟೆ?

ಆ ದಾನವ್ರತಾದ್ಯಾಚರಣಾರ್ಥವಾಗಿಯಾದರೂ ಧನವನ್ನು-ಭಾಗ್ಯವನ್ನು-ಬಯಸುವುದು ಧರ್ಮವಲ್ಲವೇ ?

ಉ—ಅಲ್ಲ. ಉಂಛವೃತ್ತಿಯಿಂದ ಜೀವಿಸುವವನು ಕೂಡ ತಾನು ತಂದ ಧಾನ್ಯದೊಳಗೆ ತಕ್ಕಮಟ್ಟಿಗೆ ವೈಶ್ವದೇವ, ಬಲಿಹರಣ, ಅತಿಥಿಸತ್ಕಾರಾದಿಗಳನ್ನು ನಡೆಯಿಸುವುದುಂಟು. ತದರ್ಥವಾಗಿ ಅಧಿಕಧನವಾವಶ್ಯಕವಲ್ಲ. ಆ ಧನವನ್ನು ಆಶಿಸಿದರೆ ಅದರೊಡನೆಯೇ ಪಾಪವು ಪ್ರಾಪ್ತವಾಗುವುದು ಸ್ವಭಾವವು. ಸ್ವಸ್ವವಿಹಿತವೃತ್ತಿಯಿಂದ ಪ್ರಾಪ್ತವಾದಷ್ಟು ಧನದಿಂದ ಯಜ್ಞದಾನಂಗಳಂ ನಡೆಯಿಸಿದರೆ ಸಾಕು.

ಶ್ಲೋ|| " ಧರ್ಮಾರ್ಥಂ ಯಸ್ಯ ವಿತ್ತೇಹಾ ವರಂ ತಸ್ಯ ನಿರೀಹತಾ |
ಪ್ರಕ್ಷಾಳನಾದ್ಧಿ ಪಂಕಸ್ಯ ದೂರಾ ದಸ್ಪರ್ಶನಂ ವರಂ || "

ಭಾ-ವನಪರ್ವ ಅ ೨ ಶ್ಲೋ ೪೯.

ಕೆಸರನ್ನು ಮೆತ್ತಿಕೊಂಡು ಬಳಿಕ ತೊಳೆದುಕೊಳ್ಳುವುದಕ್ಕಿಂತಲು ಆ ಕೆಸರನ್ನು ಮುಟ್ಟದೆ ದೂರವಾಗಿರುವುದೇ ಲೇಸು ಎಂಬಂತೆ ದಾನಧರ್ಮಾರ್ಥವಾಗಿ ಧನವನ್ನು ಪಡೆಯಬೇಕೆಂಬ ಇಚ್ಛೆಯಿಂದ ಪ್ರಥಮದಲ್ಲಿ ಪ್ರವರ್ತಿಸಿ, ಬಳಿಕ ಪೇರಾಶೆಗೊಳಗಾಗುವುದಕ್ಕಿಂತಲೂ ಆ ಧನಾರ್ಜನದಲ್ಲಿ ಆಶೆಯನ್ನೇ ಮಾಡದೆ ಯದೃಚ್ಛಾಲಾಭದಿಂದ ಪ್ರಾಪ್ತವಾದುದರಲ್ಲಿಯೇ ವಿಹಿತಕರ್ಮವನ್ನು ಯಥಾಶಕ್ತಿ ನಡೆಯಿಸಿಕೊಂಡು ಬರುವುದು ಉತ್ತಮವೆಂದು ಹೇಳಿದೆ.

ಆದುದರಿಂದ ಈ ದೇಹರಕ್ಷಣಾರ್ಥವಾಗಿಯೂ, ಅವಶ್ಯಭರ್ತವ್ಯಭರಣಾರ್ಥವಾಗಿಯೂ, ಆವಶ್ಯಕವಾದಷ್ಟು ಧನವನ್ನು ಅಕ್ಲೇಶದಿಂದ ಪಡೆಯಬೇಕು. ಅದರಿಂದ ಸಾಧ್ಯವಾದಷ್ಟು ಯಜ್ಞದಾನಾದಿಗಳನ್ನು ಬಿಡದೆ ಅನುಷ್ಠಿಸುತ್ತ ಬರುವ ಬಡವನುವೆಂದಿಗೂ ಪಾಪಿಯೆನಿಸನು. ಇನ್ನು ಇಂದ್ರಿಯಪ್ರೀತ್ಯರ್ಥವಾಗಿಯು, ದಾರಪುತ್ರಾದಿಗಳಲ್ಲಿ ಅತ್ಯಭಿಮಾನದಿಂದ ಅತಿಲೋಭಪಟ್ಟು ಸಂಚಯಮಾಡುತ್ತ ಬಂದರೂ, ಇಲ್ಲವೇ ವಿವಿಧಕಾಮ ಭೋಗಾರ್ಥವೇ ಹಣವನ್ನು ಕೂಡಿಡಲಾರಂಭಿಸಿದರೂ ಅಂತಹವನು ಕೆಡುವನು. ಅತೃಪ್ತಿಯಿಂದ ಸಂತೋಷವಿಲ್ಲದೆ ಇಹದಲ್ಲಿ ಕೆಡುವನು. ಧನಲೋಭದಿಂದ ದಾನಯಜ್ಞಾದಿಗಳನ್ನಾಚರಿಸದೆ ಪರದಲ್ಲಿ ಸದ್ಗತಿಯನ್ನು ಪಡೆಯಲಾರನು. ಅದರಿಂದ ಅಂತಹವನಿಗೆ ಉಭಯಭ್ರಷ್ಟತ್ವವೇ ಸಿದ್ಧಿಸುವುದು.

" ಈಹಾ ಧನಸ್ಯ ನ ಸುಖಾ ಲಬ್ಧ್ವಾ ಚಿಂತಾ ಚ ಭೂಯಸೀ |
ನ ಚ ತುಷ್ಯತಿ ಲಬ್ಧೇನ ಭೂಯ ಏವ ಚ ಮಾರ್ಗತಿ || ಭಾ| ಶಾಂ| ೧೭೬ ಅ||

ಯಃ ಕಾಮಾನಾಪ್ನುಯಾತ್ಸರ್ವಾನ್ ಯಶ್ಚೈತಾನ್ ಕೇವಲಾಂಸ್ತ್ಯಜೇತ್ |
ಪ್ರಾಪಣಾತ್ಸರ್ವಕಾಮಾನಾಂ ಪರಿತ್ಯಾಗೋ ವಿಶಿಷ್ಯತೇ ||೧೬||"

ಧನಾಶೆಯು ಸುಖಕರವಲ್ಲ. ಧನವು ಲಭಿಸಿದಷ್ಟೂ ಚಿಂತೆಯೂ ಹೆಚ್ಚುವುದು. ಅಷ್ಟರಿಂದಲೇ ತೃಪ್ತನಾಗದೆ ಇನ್ನೂ ಅಧಿಕವಂ ಪಡೆಯಲು ಅರಸುತ್ತಿರುವನು. ಆದ ರಿಂದ ಕಾಮಿತಾರ್ಥಗಳೆಲ್ಲವನ್ನೂ ಪಡೆಯುವೆನೆಂಬ ಸಂಕಲ್ಪವನ್ನು ಬಿಟ್ಟು ಯದೃಚ್ಛಾ ಲಾಭದಿಂದ ತೃಪ್ತನಾಗಿರುವ ಬಡವನೇ ಭಾಗ್ಯವಂತನು, ಅವನೇ ಸುಖಿಯೆಂದು ತಿಳಿಯಬೇಕು.

೧೭. ಆ—ಸರಿ. ಆದರೆ ಉಂಛವೃತ್ತಿ ಸರ್ವಶ್ರೇಷ್ಠಜೀವನವೆಂದು ಎಲ್ಲರೂ ಭಿಕ್ಷೆ ಬೇಡುವರಾದರೆ ಭಿಕ್ಷೆ ನೀಡುವರು ಯಾರು ? ಇದು ಮಾತ್ರ ಕ್ಲೇಶಕಾರಿಯು ಲ್ಲವೆ ? ಸಾಧುಗಳೆನಿಸಿಕೊಂಡವರು ಭಿಕ್ಷೆ ಬೇಡಲೇಬೇಕೆಂದು ವಿಧಿಯೋ ? ಬೇರೆ ಬಗೆ ಯಿಂದ ಬದುಕುವುದು ಶಾಸ್ತ್ರವಿರುದ್ಧವೋ ?

ಉ—ಎಲ್ಲರೂ ಭಿಕ್ಷೆ ಬೇಡುವರಲ್ಲ. ಬ್ರಾಹ್ಮಣರು ಮಾತ್ರವೇ. ಅದರಲ್ಲಿಯೂ ಬ್ರಹ್ಮಚಾರಿಯತಿಗಳೇ. ನೀಡುವರು ನರಾಧಿಪರು, ಎಲ್ಲಾ ಗೃಹಸ್ಥರು. "ಗಣಾದ್ಗೃಹೀತಾ ವರ್ಧೇತ" ಎಂದು ದಾತೃಗಳನೇಕರಿಂದ ಅಲ್ಪಾಲ್ಪವಾಗಿ ಪ್ರತಿಗ್ರಹಿಸುತ್ತ ಅವರ ಪಾಪವಂ ಕಳೆದು ತಮ್ಮ ಪುಣ್ಯವನ್ನು ಅವರಿಗೆ ನೀಡಿ ಅನುಗ್ರಹಿಸುವುದೇ ಸಾಧುಗಳ ಸದ್ವರ್ತನವು. ಹೀಗಿರುವುದು ಕ್ಲೇಶಕಾರಿಯಲ್ಲ. ಆತ್ಮಾಶೆಯಿಂದ ಪರರಂ ಪ್ರೀತಿಸುವುದೊಂದೇ ದುಃಖಜೀವನವು. "ಅಕ್ಲೇಶೇನಾರ್ಜಯೇದ್ಧನಂ" ಎಂದು ಭರ್ತವ್ಯಭರಣಾರ್ಥವಾಗಿ ದಾತಾರರಲ್ಲಿ ಹೋಗಿ ಬೇಡುವುದು ಧರ್ಮ್ಯವಾಗಿಯೇ ಇದೆ. ಇದೇ ಬ್ರಾಹ್ಮಣಗೆ ಯಾಜನ, ಅಧ್ಯಾಪನ, ಪ್ರತಿಗ್ರಹಗಳೆಂಬ ನಾಮದಿಂದ ಜೀವಿಕೆ ಯಾಗಿದೆ. ಯಜನ, ಅಧ್ಯಯನ, ದಾನ, ಇವು ಮೂರು ಕ್ಷತ್ರಿಯ್ಯಗೂ, ಬ್ರಾಹ್ಮ ಣಗೂ ಸ್ವಧರ್ಮವೆನಿಸಿಕೊಂಡು ನಿತ್ಯಕರ್ಮಕ್ಕೇ ಸೇರಿಯಿವೆ. ಕ್ಷತ್ರಿಯಗೆ ಯಾಜನಾ ಧ್ಯಾಪನ ಪ್ರತಿಗ್ರಹಗಳು ಮೂರು ಸ್ವಧರ್ಮಕ್ಕೆ ಸೇರಿಯಿಲ್ಲ. ಕ್ಷತ್ರಿಯಧರ್ಮವು ದುಷ್ಟ ನಿಗ್ರಹಶಿಷ್ಟಪರಿಪಾಲನವು, ವೈಶ್ಯಗೆ ವಾಣಿಜ್ಯವು, ಶೂದ್ರಗೆ ಸೇವೆ, ಕೃಷಿ, ಪಶುಪಾ ಲನಗಳು, ವಿಹಿತಗಳು. ಅವರವರಿಗೆ ವಿಹಿತವಾದ ವೃತ್ತಿಯಿಂದ ಬದುಕಲಾರದಿದ್ದರೆ— ಬ್ರಾಹ್ಮಣನು ಕ್ಷತ್ರಿಯ ವೈಶ್ಯವೃತ್ತಿಗಳಿಂದಲೂ, ಕ್ಷತ್ರಿಯನು ವೈಶ್ಯವೃತ್ತಿಯಿಂ ದಲೂ, ವೈಶ್ಯನು ಶೂದ್ರವೃತ್ತಿಯಿಂದಲೂ ಬಾಳಬಹುದು "ರಾಜನಾದವನು—

ಶ್ಲೋ|| ತಸ್ಯ ವೃತ್ತಂ ಕುಲಂ ಶೀಲಂ ಶ್ರುತ ಮಧ್ಯಯನಂ ತಪಃ |
ಜ್ಞಾತ್ವಾ ರಾಜಾ ಕುಟುಂಬಂ ಚ ಧರ್ಮ್ಯಾಂ ವೃತ್ತಿಂ ಪ್ರಕಲ್ಪಯೇತ್ || (ಯಾಜ್ಞ)

ಹೀಗೆ ತತ್ತದ್ಯೋಗ್ಯತಾನುಗುಣವಾದ ವೃತ್ತಿಗಳನ್ನು ಕಲ್ಪಿಸಿಕೊಟ್ಟು ಕಾಯ ಲುಬೇಕು'' ಎಂದು ಶಾಸ್ತ್ರವಿದೆ.

೧೮. ಆ—ಲೋಕದಲ್ಲಿ ಇಂತಹವರು ಹೀಗೆಯೇ ಜೀವಿಸಬೇಕೆಂದು ವಿಧಿ ಯುಂಟೇ? ಅವರವರು ಅನುಕೂಲ್ಯವುಂಟಾದಂತೆ ವೃತ್ತಿಯನ್ನು ಕಲ್ಪಿಸಿಕೊಂಡು ಬಾಳುವುದರಲ್ಲಿ ಶಾಸ್ತ್ರವಿರೋಧವೇನಾದರೂ ಇದೆಯೋ?

ಉ—ಸ್ವೇಚ್ಛೆಯಿಂದ ಜೀವನವನ್ನು ಕಲ್ಪಿಸಿಕೊಳ್ಳುವುದರಲ್ಲಿ ವಿರೋಧವುಂಟಾಗಬಹುದು. ಶಾಸ್ತ್ರದ ವಿಧಿನಿಷೇಧಗಳನ್ನು ಅರಿತು ಜೀವಿಸುವುದರಲ್ಲಿ ಯಾವ ವಿರೋಧವೂ ಇಲ್ಲ. ಆದರೆ ಪೂರ್ವದಲ್ಲಿ ಜನರ ಜೀವನಾದಿ ಧರ್ಮವಿಷಯದಲ್ಲಿ ಕೂಡ ರಾಜಾಜ್ಞೆಯೊಂದು ಪ್ರಬಲವಾಗಿದ್ದಿತು. "ವರ್ಣಾನಾಮಾಶ್ರಮಾಣಾಂಚ ರಾಜಾ ಸೃಷ್ಟೋಽಭಿರಕ್ಷಿತಾ'' ಎಂದು. ಈಗ ಹಾಗಿಲ್ಲವಾದುದರಿಂದ ನಾವು ನಾವೇ ಈ ಕಾಲದೇಶಗಳಿಗೆ ತಕ್ಕಂತೆಯು, ಈ ಜೀವಾತ್ಮಗೆ ದುಸ್ಸಂಸ್ಕಾರವುಂಟಾಗಿ ದುರ್ಗತಿದಾಯಕವಾಗದಂತೆಯು, ಆಪದ್ಧರ್ಮಮರ್ಮವನ್ನೂ ತಿಳಿದು ಸಾಧುಗಳು ಬಾಳಬೇಕಲ್ಲದೆ ಹಲವು ಬಗೆ-ಹಾದಿಗಳಿಗೆ ಹೋಗಬಾರದು.

೧೯. ಆ—ಅದು ಹೇಗೆ? ಯಾರಿಗೆ ಯಾವ ಜೀವನವು ಶಾಸ್ತ್ರವಿಹಿತವಾಗಿದೆ? ಆಪದ್ಧರ್ಮವೆಂಬುದು ಅವುದು?

ಉ—"ಕರ್ಮಾಣಿ ಪ್ರವಿಭಕ್ತಾನಿ ಸ್ವಭಾವಪ್ರಭವೈರ್ಗುಣೈಃ'' ಎಂದಿರುವುದರಿಂದ ಸಾತ್ವಿಕಾದಿ ಗುಣಭೇದದಿಂದ ಸೃಷ್ಟರಾಗಿರುವ ಬ್ರಾಹ್ಮಣಾದಿವರ್ಣಗಳ ಸಹಜಗುಣಗಳಿಗೆ ಅನುಗುಣಗಳಾದಂತಹ ವೃತ್ತಿಗಳಿಂದ ಸಾಧುಗಳು ಜೀವಿಸುತ್ತಿದ್ದುದು ಮುಖ್ಯ ಶುದ್ಧಜೀವನವಾಗಿದ್ದುದು. ಅಲ್ಲಿಂದಾಚೆಗೆ ಜನರಲ್ಲಿ ಅತ್ಯಾದಾನ ಲೋಭಗಳಿಂದ ಅಪಜ್ಜೀವನಗಳು ಏರ್ಪಟ್ಟುವು. ಈಗೀಜೀವಿಕೆಗಳು ವ್ಯತ್ಯಸ್ತಗಳಾಗಿರುವುದರಿಂದಲೇ ವರ್ಣಸಾಂಕರ್ಯವುಂಟಾಗಿರುವುದು ಮಾತ್ರವಲ್ಲದೆ ಆಯುರಾರೋಗ್ಯಾದ್ಯೈಹಿಕಸುಖವು ಕೂಡ ಅತ್ಯಂತ ನೀಚಸ್ಥಿತಿಗೆ ಬಂದಿದೆ. ಈಗ ಯಾವನೊಬ್ಬನಾದರೂ ಪೂರ್ಣಾಯುರಾರೋಗ್ಯಪ್ರದ ಸಾತ್ವಿಕವೃತ್ತಿಯಿಂದ ಬದುಕಬೇಕೆಂದು ಬಯಸಿದರೂ ಅವನ ಯತ್ನಕ್ಕೆ ಸಾಧ್ಯವಲ್ಲದಷ್ಟು ವೃತ್ತಿಸಾಂಕರ್ಯವಧಿಕವಾಗಿ ಏರ್ಪಟ್ಟಿದೆ. ೬೦-೭೦ ವರ್ಷ ಬದುಕಿದ್ದರೆ ಈಗ ಇದೇ ಸಂಪೂರ್ಣಾಯುಸ್ಸೆಂದು ಹೇಳುತ್ತಾರೆ. ದೇವರು ದಯೆಮಾಡಿದ ಆಯುಸ್ಸಿನಲ್ಲಿ ಅರ್ಧಭಾಗವನ್ನಾದರೂ ಅನುಭವಿಸುವುದಕ್ಕಾಗದಷ್ಟು ಅಧರ್ಮಗಳು ಪ್ರಬಲಿಸಿವೆ.

೨೦. ಪ—ಸರಿ. ಅಹುದು–ಕಲಿಧರ್ಮ–ಅದಕ್ಕೇನುಮಾಡುವುದು ? ಪೂರ್ವದಲ್ಲಿ ಆ ಸಾಧುಗಳು ಹೇಗೆ ಜೀವಿಸುತ್ತಿದ್ದರು ? ಅದರಲ್ಲಿಯೂ ಬ್ರಾಹ್ಮಣಾದಿಗಳಿಗೆ ತಕ್ಕ ಜೀವನಗಳು ಅವುವಾಗಿದ್ದುವು ? ಅವರ ಸಹಜಗುಣಗಳೆಂದಿರೇ, ಅವಾವುವು ?

ಉ—ಆ ಸಾಧುಗಳ ಜೀವನವು ವಿಶೇಷಪರಾಪೇಕ್ಷೆಯಿಲ್ಲದ ಶುದ್ಧವೃತ್ತಿಯೂಗಿದ್ದಿತು. ಪಾರತಂತ್ರ್ಯದ ಸೇವಾವೃತ್ತಿಯೊಂದು ದ್ವಿಜರಿಗಿರಲೇ ಇಲ್ಲ. ಅಥವಾ ಒಂದೊಂದು ವೇಳೆ ಕೆಲವರಲ್ಲಿ ಆಪದ್ವಿಶೇಷದಿಂದ ಆ ನೀಚವೃತ್ತಿ ತೋರಬಂದಿದ್ದರೂ ಆಯಾಪತ್ತು ತೀರಿದಮೇಲೆ ಆ ವೃತ್ತಿಯಂ ಬಿಟ್ಟು ಸ್ವವಿಹಿತವೃತ್ತಿಯಿಂದಲೇ ಇರುತ್ತಿದ್ದರು. ಅದು ಹೇಗೆಂದರೆ:—ಸಾಧುಬ್ರಾಹ್ಮಣನ ಸಹಜಗುಣವು, ಸತ್ತ್ವಗುಣವು; ಅವನ ಕರ್ಮವು, ಸಾತ್ವಿಕವು; ವೃತ್ತಿಯೂ ಅವಕ್ಕೆ ಅನುಗುಣವಾದುದೇ ಆಗಿರುವುದು:—ಭ. ಗೀ. ೧೮

“ ಶಮೋ ದಮಸ್ತಪಃ ಶೌಚಂ ಕ್ಷಾನ್ತಿರಾರ್ಜವಮೇವಚ |
ಜ್ಞಾನಂ ವಿಜ್ಞಾನ ಮಾಸ್ತಿಕ್ಯಂ ಬ್ರಹ್ಮಕರ್ಮ ಸ್ವಭಾವಜಮ್ ||” ||೪೨||
“ ನಿಯತಂ ಸಂಗರಹಿತಮರಾಗದ್ವೇಷತಃ ಕೃತಮ್ |
ಅಫಲಪ್ರೇಪ್ಸುನಾ ಕರ್ಮಯತ್ತತ್ಸಾತ್ವಿಕ ಮುಚ್ಯತೇ ||” ||೨೩||

ಶಾನ್ತಿ–ಸರ್ವದಾ ಸರ್ವತ್ರಭಗವನ್ನಿಷ್ಠೆ, ದಮ–ಇಂದ್ರಿಯನಿಗ್ರಹ, ತಪ–ದೇವಪೂಜಾದಿತ್ರಿವಿಧ (ಶಾರೀರವಾಚಿಕಮಾನಸಿಕ) ಬ್ರಹ್ಮಚರ್ಯಾದಿ ರೂಪತಪಸ್ಸು, ಶೌಚ–ಬಾಹ್ಯಾಭ್ಯಂತರಶುದ್ಧಿ, ಕ್ಷಾಂತಿ–ಕೋಪಕಾರಣವಿದ್ದರೂ ಕೋಪಮಾಡದಿರುವುದು, ಆರ್ಜವ–ಮನೋವಾಕ್ಕಾಯಕರ್ಮಗಳ ವೈಪರೀತ್ಯವಿಲ್ಲದೆ ಏಕವಾಗಿರುವುದು, ಸಾಮಾನ್ಯಜ್ಞಾನವಿಶೇಷಜ್ಞಾನಗಳು, ಧರ್ಮಪರಲೋಕಾದಿಗಳಲ್ಲಿ ಫಲವುಂಟೆಂಬ ಭಾವನೆ; ಇವೆಲ್ಲವೂ ಬ್ರಾಹ್ಮಣಸ್ವಭಾವಕ್ಕೆ ಸೇರಿದ ಧರ್ಮಗಳು ; ||೪೨|| ಭಗವದ್ಭಕ್ತಿಯೊಡನೆ ತದರ್ಪಣಬುದ್ಧಿಯಿಂದ ಮಾಡುವ ಸಂಧ್ಯಾದಿಯಾದ ವರ್ಣಾಶ್ರಮೋಚಿತವಾದ, ಇಚ್ಛಾದ್ವೇಷಗಳಿಲ್ಲದೆ, ಫಲಾಪೇಕ್ಷೆ ಮಾಡದೆ, ಸ್ವಾಹಂಕಾರತ್ಯಾಗಮಾಡಿ, ಮಾಡುವಂತಹ ವಿಹಿತಕರ್ಮವೆಲ್ಲವೂ ಸಾತ್ವಿಕವೆನ್ನಲ್ಪಡುವುದು. ||೨೩|| ಇಂತಹ ಕರ್ಮವನ್ನು ಮಾಡುವ ಸಾತ್ವಿಕನಾದಾಬ್ರಾಹ್ಮಣಾಧಿಕಾರಿಯು ಕೂಡ ಆ ಕರ್ಮಗಳನ್ನು ಆಚರಿಸುವಾಗ ದುಃಖಸಹನಮಾಡತಕ್ಕ ಧೃತಿಯಿಂದಲೂ, ಸ್ವಕರ್ತವ್ಯದಲ್ಲಿ ಉತ್ಸಾಹದಿಂದಲೂ, ಕೂಡಿ ಆ ಕರ್ಮಫಲಗಳ ಸಿದ್ಧ್ಯಸಿದ್ಧಿ ವಿಷಯಗಳಲ್ಲಿ ಮನೋವಿಕಾರವಿಲ್ಲದೆ ಹರ್ಷವಿಷಾದರಹಿತನಾಗಿರುವನು. ಇಂತಹ ಶುದ್ಧವಿಪ್ರರಿಗೆ ವಿಧಿಸಿರುವ ವೃತ್ತಿಗಳಾವುವೆಂದರೆ:—

" ಅದ್ರೋಹೇಣೈವ ಭೂತಾನಾ ಮಲ್ಪದ್ರೋಹೇಣ ವಾ ಪುನಃ |
ಯಾ ವೃತ್ತಿಸ್ತಾಂ ಸಮಾಸ್ಥಾಯ ವಿಪ್ರೋ ಜೀವೇದನಾಪದಿ || ಮ ೪-೨ ||
ಯಾತ್ರಾಮಾತ್ರ ಪ್ರಸಿದ್ಧ್ಯರ್ಥಂ ಸ್ವೈಃ ಕರ್ಮಭಿರಗರ್ಹಿತೈಃ |
ಅಕ್ಲೇಶೇನ ಶರೀರಸ್ಯ ಕುರ್ವೀತ ಧನಸಞ್ಚಯಮ್ ||೩||
ಋತಾಮೃತಾಭ್ಯಾಂ ಜೀವೇತ ಮೃತೇನ ಪ್ರಮೃತೇನವಾ |
ಸತ್ಯಾನೃತಾಭ್ಯಾ ಮಪಿವಾ ನ ಶ್ವವೃತ್ತ್ಯಾ ಕದಾಚನ ||೪|| "

ಯಾವ ಪ್ರಾಣಿಗೂ ಯಾವ ವಿಧವಾದ ಹಿಂಸೆಯೂ ಉಂಟಾಗದಂತೆ, ಅಥವಾ ಆಪತ್ತಿನಲ್ಲಿ ಅಲ್ಪವಾದ ತೊಂದರೆಗೊಟ್ಟಾಗಲಿ, ಯಾಜನಾಧ್ಯಾಪನ ಪ್ರತಿಗ್ರಹಗಳಿಂದ ಲಬ್ಧವಾದ ದ್ರವ್ಯದಿಂದ ಪಂಚಮಹಾಯಜ್ಞಾದಿ, ಸ್ವಧರ್ಮನಿರತನಾಗಿದ್ದು ವಿಪ್ರನು ಸ್ವಸ್ಥನಾಗಿ ಜೀವಿಸಬೇಕು ||೨|| ಆಪತ್ತೇನೂ ಇಲ್ಲದಿರುವಾಗ ಶಾಸ್ತ್ರವಿಹಿತವಾದ ಭರ್ತವ್ಯಕುಟುಂಬಭರಣಕ್ಕೆ ತಕ್ಕಷ್ಟು ಧನವನ್ನು ಲೋಕಶಾಸ್ತ್ರನಿಂದಿತವಲ್ಲದ ಕರ್ಮವನ್ನು ಮಾಡುತ್ತ ಸಂಪಾದಿಸುವಾಗ ಅಧಿಕಕಾಯಕ್ಲೇಶವಿಲ್ಲದಂತೆ ಮಾಡಿಕೊಂಡು ಅರ್ಜಿಸಬೇಕು. ||೩|| ಆ ಕರ್ಮಗಳಾವುವೆಂದರೆ:—" ಋತ-ಕಣಗಳಲ್ಲಿ ಕೈಯಿಂದ ಕಾಳುಗಳನ್ನು ಆಯ್ದು ತಂದುಕೊಳ್ಳುವುದು-ಇದೇ ಉಂಛವೃತ್ತಿಯು; ಇನ್ನೂ ಬಳ್ಳಿ ಗಿಡ ಮರಗಳಿಗೆ ಹಾನಿಯಾಗದಂತೆಯೇ ತೆನೆಗೊಂಚಲು ಹಣ್ಣುಕಾಯಿ ಹೂಗಳನ್ನು ಪಡೆದುಕೊಳ್ಳುವುದು-ಇದು ಶಿಲವೃತ್ತಿಯು; ಈ ಋತವೃತ್ತಿಯು ಕಾಡಿನಲ್ಲಿ ಪರ್ಣಶಾಲೆಮಾಡಿಕೊಂಡು ತಪಸ್ಸುಮಾಡುವ ಮಹಾತ್ಮರಾದ ಮುನಿಗಳ ಶುದ್ಧಸಾತ್ವಿಕ ಸಾತ್ವಿಕವಾದುದು. ಇದು ವಾನಪ್ರಸ್ಥಧರ್ಮಕ್ಕೆ ಸೇರಿರುವುದು. ೨-ಅಮೃತ-ಏನನ್ನೂ ಯಾರನ್ನೂ ಯಾಚಿಸದೇ ಯಾದೃಚ್ಛಿಕವಾಗಿ ಪ್ರಾಪ್ತವಾಗುವ ದ್ರವ್ಯದಿಂದ, ಅನ್ನ, ಧಾನ್ಯ, ಮುಂತಾದುದರಿಂದ ಜೀವಿಸುವುದು, ಇದು ಕೇವಲ ಸ್ವತಂತ್ರವಾದುದರಿಂದ ಅಮೃತಜೀವನವೆಂದು ಹೇಳಿದೆ. ೩-ಮೃತ-ಯಾಚನೆಯಿಂದಲೂ, ದಾನಪ್ರತಿಗ್ರಹದಿಂದಲೂ, ಭಿಕ್ಷಬೇಡಿ ಜೀವಿಸುವುದು. ಇದು ತನಗೂ ಪರರಿಗೂ ಪೀಡಾಕರವಾಗುವುದರಿಂದ ಮೃತವೆನಿಸಿದೆ. ೪. ಪ್ರಮೃತ-ಕೃಷಿ-ಬೇಸಾಯದಿಂದ ಬದುಕುವುದು-ಇದು ನೆಲದಲ್ಲಿದ್ದ ಪ್ರಾಣಿಗಳಿಗೆ ಮರಣವೇ ಆಗುವುದರಿಂದ ಅಧಿಕಮೃತಜೀವನವೆನಿಸಿದೆ. ೫. ಸತ್ಯಾನೃತ-ವಾಣಿಜ್ಯವು-ದಿಟವು ಹುಸಿಯು ಕಲತು ಇರುವುದು, ಕ್ರಯವಿಕ್ರಯ, ಬಡ್ಡಿ, ಶಿಲ್ಪ, ಮುಂತಾದ ಕೈಕೆಲಸಗಳು. ಇವೈದು ಬಗೆಯ ವೃತ್ತಿಗಳೂ ಕಾಲದೇಶಾನುಗುಣವಾಗಿ ಬ್ರಾಹ್ಮಣಗೆ ವಿಹಿತಗಳಾಗಿವೆ. ೬ ನೆಯದಾದ ಸೇವಾರೂಪ ಶ್ವವೃತ್ತಿಯು-ನಾಯಿಯಂತೆ ಧನಿಕನ ಬಾಗಿಲು ಕಾ

ಯುತ್ತ ಅವನ ಮನೋನುಗುಣವಾಗಿ ನಡೆಯುತ್ತ ಶರೀರವನ್ನೇ ಮಾರಿಕೊಂಡಂತೆ ಸ್ವಾತಂತ್ರ್ಯವನ್ನು ಕಳೆದುಕೊಂಡು ಅತಿ ನೈಚ್ಯದಿಂದ ಆ ಧನದಾತಗೆ ಅತಿ ನಮ್ರನಾಗಿ ಸೇವಿಸುವುದು ಮಾತ್ರ ಬ್ರಾಹ್ಮಣಗೆ ಕೂಡದು. ಇದೇ ನಾಯಿಯಬಾಳೆಂದು ಸರ್ವಶಾಸ್ತ್ರಗಳೂ ದೂಷಿಸುತ್ತಿವೆ. ಆದುದರಿಂದ ಈ ಸೇವಾವೃತ್ತಿಯು ಸಾಧುಗಳ ಸ್ವಧರ್ಮವೂ ಅಲ್ಲ. ಸ್ವಸ್ಥರ ಜೀವನವೂ ಅಲ್ಲ. ಮಹಾವಿಪತ್ಪ್ರದವು.

೨೧. ಅ—ಆಪದ್ಧರ್ಮಗಳಾವುವೋ ಹೇಳಲಿಲ್ಲವಲ್ಲ? ಅವು ಎಷ್ಟಿವೆ?

ಉ—ಹೇಳಿದೆನೇ. ಉತ್ತಮವರ್ಣದವರು ಅಧಮವರ್ಣದವರ ವೃತ್ತಿಯಿಂದ ಬಾಳುವುದೇ ಆಪದ್ಧರ್ಮವು. ಲೋಕದಲ್ಲಿ ಜೀವಿಕೆಗಳು ಸಾಮಾನ್ಯವಾಗಿ ಹತ್ತುಬಗೆಯೆಂದೂ, ಅದಲ್ಲದೆ ಏಳು ಧನಾಗಮಮಾರ್ಗಗಳು ಧರ್ಮ್ಯಗಳೆಂದೂ, ಮನೂಕ್ತಿಯುಂಟು:—

ಶ್ಲೋ|| ವಿದ್ಯಾ, ಶಿಲ್ಪಂ, ಭೃತಿಃ, ಸೇವಾ, ಗೋರಕ್ಷಾ, ವಿಪಣಿಃ, ಕೃಷಿಃ |
ಗಿರಿ, ಭೈಕ್ಷ್ಯಂ, ಕುಸೀದಂಚ, ದಶ ಜೀವನ ಹೇತವಃ || ೧೦-೧೧೬ ||
ಸಪ್ತ ವಿತ್ತಾಗಮಾ ಧರ್ಮ್ಯಾ ದಾಯೋ ಲಾಭಃ ಕ್ರಯೋ ಜಯಃ |
ಪ್ರಯೋಗಃ ಕರ್ಮಯೋಗಶ್ಚ ಸತ್ಪ್ರತಿಗ್ರಹ ಏವಚ ||೧೧೫||
ಕ್ಷಾತ್ರೇಣ ಕರ್ಮಣಾ ಜೀವೇ ದ್ವಿಶಾಂ ವಾ ಹ್ಯಾಪದಿ ದ್ವಿಜಃ |
ನಿಸ್ತೀರ್ಯ ತಾ ಮಥಾತ್ಮಾನಂ ಪಾವಯಿತ್ವಾ ನ್ಯಸೇತ್ಪಥಿ || (ಯಾಜ್ಞ)

ವಿದ್ಯೆ—ಎಂದರೆ ವೇದವೇದಾಂತಗಳು ಹೊರತು ಮಿಕ್ಕ ತರ್ಕವ್ಯಾಕರಣ ವೈದ್ಯಜ್ಯೋತಿಶ್ಶಾಸ್ತ್ರಾದಿಗಳು, ಶಿಲ್ಪ-ಚಿತ್ರಲೇಖನ 'ಗಂಧಯುಕ್ತ್ಯಾದಿಗಳು, ಸಂಬಳಕ್ಕಾಗಿ ಕೆಲಸಮಾಡುವುದು, ಪರರ ಚಿತ್ತವನ್ನು ಅನುವರ್ತಿಸುತ್ತ ಬಾಳುವುದು, ಪಶುಗಳನ್ನು ಸಾಕುವುದು, ಅಂಗಡಿಯಿಟ್ಟು ಮಾರುವುದು, ವ್ಯವಸಾಯ, ಬೆಟ್ಟದಲ್ಲಿ ಹುಟ್ಟುವ ಧಾತುಕಾಷ್ಠ ತೃಣಶಾಕಫಲಾದಿಗಳಿಂದ ಬದುಕುವುದು, ಭಿಕ್ಷಾಸಮೂಹ-ಯಾಚನೆ, ಬಡ್ಡಿಯ ಜೀವನ (ಬಂಡಿಬಾಡಿಗೆ ಮುಂತಾದುದು) ಇವು ಹತ್ತು ಸರ್ವಸಾಧಾರಣ ಜೀವನಪ್ರದಗಳು ||೧೧೬|| ಪಿತ್ರಾದಿಗಳಿಂದ ಲಬ್ಧವಾದ ಗೃಹಾರಾಮಾದಿಗಳು, ನಿಧ್ಯಾದಿಲಾಭವು, ರತ್ನಾದಿವಸ್ತುಕ್ರಯ-ಇವು ಮೂರು ಸರ್ವವರ್ಣಸಾಧಾರಣವಾದ ಧನಾಗಮಮಾರ್ಗಗಳು; ಯುದ್ಧದ್ಯೂತಾದಿಗಳಲ್ಲಿ ಗೆದ್ದು ಸಂಪಾದಿಸುವುದು-ಇದು ಕ್ಷತ್ರಿಯಗೆ ಮಾತ್ರವೇ; ಬಡ್ಡಿ, ಬಾಡಿಗೆ, ವ್ಯಾಪಾರ, ಕೃಷಿವಾಣಿಜ್ಯಗಳು, ಇವೆರಡು ವೈಶ್ಯಗೆ ಸ್ವಧರ್ಮವು; ಸತ್ಪ್ರತಿಗ್ರಹ-ಸಜ್ಜನರಿಂದ ಉತ್ತಮವಸ್ತುಗಳನ್ನು

ದಾನಪಡೆಯುವುದು ಬ್ರಾಹ್ಮಣಗೆ ಮಾತ್ರವೇ ಧರ್ಮ್ಯವು. ಹೀಗೆ ಇವೇಳೂ ಆಪತ್ತಿನಲ್ಲಿ ಜೀವಿಕೆಗಳಾಗುವುವು ||೧೧೫|| ಬ್ರಾಹ್ಮಣನು ಆಪದ್ದಶೆಯಲ್ಲಿ ಕ್ಷತ್ರಿಯ ವೈಶ್ಯವೃತ್ತಿಗಳಿಂದಾದರೂ ಜೀವಿಸಿದ್ದು, ಆಯಾಪತ್ತು ಕಳೆದಮೇಲೆ ಪ್ರಾಣಾಯಾಮಾದಿಯಾದ ಯಥೋಕ್ತಪ್ರಾಯಶ್ಚಿತ್ತರೂಪತಪಸ್ಸಿನಿಂದ ಶುದ್ಧನಾಗಬೇಕು. ಆಪತ್ತು ತೀರಿದ ಬಳಿಕ ಭಾಗ್ಯವಂತನಾಗಬೇಕೆಂಬ ದುರಾಶೆಯಿಂದ ಧನಸಂಗ್ರಹದಿಂದ ಪ್ರಮತ್ತನಾಗಬಾರದು.

"ನೇಹೇತಾರ್ಥಾನ್ಪ್ರಸಂಗೇನ ನ ವಿರುದ್ಧೇನ ಕರ್ಮಣಾ |
ನ ವಿದ್ಯಮಾನೇಷ್ವರ್ಥೇಷು ನಾರ್ತ್ಯಾಮಪಿ ಯತಸ್ತತಃ ||೪-೧೫||"
"ನ ಲೋಕವೃತ್ತಂ ವರ್ತೇತ ವೃತ್ತಿಹೇತೋಃ ಕಥಂಚನ |
ಅಜಿಹ್ಮಾಮಶಠಾಂ ಶುದ್ಧಾಂ ಜೀವೇ ದ್ಬ್ರಾಹ್ಮಣಜೀವಿಕಾಮ್ ||೧೧||"
"ವರಂ ಸ್ವಧರ್ಮೋ ವಿಗುಣೋ ನ ಪಾರಕ್ಯಃ ಸ್ವನುಷ್ಠಿತಃ |
ಪರಧರ್ಮೇಣ ಜೀವನ್ ಹಿ ಸದ್ಯಃ ಪತತಿ ಜಾತಿತಃ ||ಮ ೧೦-೯೭||"

ಸ್ವಧರ್ಮನಿರತನಾದ ಸಾಧುವು-ಗೀತವಾದಿತ್ರಾಭಿನಯನೃತ್ಯಾದ್ಯತಿಪ್ರಸಕ್ತಿಯಿಂದಾಗಲಿ; ಶಾಸ್ತ್ರವಿರುದ್ಧವಾದ ಶುಲ್ಕ-ಲಂಚ-ಮದ್ಯಾದಿವಿಕ್ರಯ, ನೀಚಸೇವೆ, ಅಯಾಜ್ಯಯಾಜನ, ಇತ್ಯಾದಿಗಳಿಂದಾಗಲಿ; ತಕ್ಕಷ್ಟು ಜೀವನಕ್ಕೆ ಧನವಿದ್ದರೂ ಆಪದ್ವ್ಯಾಜದಿಂದ ಪತಿತಪುಲ್ಕಸಾದಿಪ್ರತಿಗ್ರಹದಿಂದಾಗಲಿ; ಧನಾರ್ಜನೆಯಂ ಮಾಡಕೂಡದು ||೧೫|| ಜೀವನಕ್ಕಾಗಿ ಸಾಮಾನ್ಯ ಪಾಮರಜನರಂತೆ ಅತಿಕ್ಲೇಶಪಡಬಾರದು; ದಮ್ಭ ವಂಚನ ಅನೃತಾದಿದೋಷಗಳಿಲ್ಲದ ಶುದ್ಧವಾದ ಬ್ರಾಹ್ಮಣವೃತ್ತಿಯಿಂದ ಬಾಳಬೇಕು ||೧೧|| ಸ್ವಧರ್ಮವನ್ನು ಅನುಷ್ಠಿಸುವಾಗ ಪರಧರ್ಮಾಚರಣದಲ್ಲಿರುವಷ್ಟು ತಾತ್ಕಾಲಿಕಗುಣಸಂಪತ್ತಿಯಿಲ್ಲದಿದ್ದರೂ, ಶ್ರಮವೇ ತೋರಿಬಂದರೂ, ಸ್ವಧರ್ಮವೇ ಶ್ರೇಷ್ಠವು. ಪರಧರ್ಮದಿಂದ ಜೀವಿಸುವನು ತತ್ಕ್ಷಣವೇ ಸ್ವಜಾತಿಯಿಂದ ಭ್ರಷ್ಟನಾಗುವನು||೧೯|| ಹೀಗಿರುವುದರಿಂದ ಸಾಧುಗಳಾದ ವರ್ಣಿಗಳು ಸ್ವಧರ್ಮಪರಧರ್ಮಗಳನ್ನೂ, ಸ್ವಸ್ಥಜೀವನ ಆಪಜ್ಜೀವನಗಳನ್ನೂ, ತಿಳಿದು; ಆಮುಷ್ಮಿಕಸದ್ಗತಿಗೆ ಲೋಪಬಾರದಂತೆಯು, ಐಹಿಕ ಸತ್ಯಧರ್ಮ ಸದಾಚಾರಾದ್ಯನುಷ್ಠಾನದಿಂದುಂಟಾಗುವ ಸತ್ಸುಖಗಳಿಗೆ ಭಂಗಬಾರದಂತೆಯು, ಯಥೋಚಿತವಾಗಿ ಯುಕ್ತಿಯಿಂದ ಬಾಳುತ್ತ ದೇವರು ಕೊಟ್ಟ ಪೂರ್ಣಾಯುರಾರೋಗ್ಯಾದಿಗಳಂ ಪಡೆದುಕೊಂಡು, ಸದಾಭೂತದಯಾದಿಗಳಿಂದ ಕೂಡಿ ಪರೋಪಕಾರನಿರತನಾಗಿರಬೇಕೆಂದು ಮುಖ್ಯಾಭಿಪ್ರಾಯವು. ಇದೇ ಸರ್ವಶಾಸ್ತ್ರಗಳ ಸಾರಾಂಶವು.

೨೨. ಆ—ವರ್ಣಧರ್ಮವು, ಆಪಜ್ಜೀವನವು, ತಿಳಿಯಿತು. ಚಾತುರಾಶ್ರಮ್ಯ, ಪಂಚಮಹಾಯಜ್ಞ, ಎಂದಿದ್ದಿರಷ್ಟೆ ? ಅವಾವುವು ?

ಉ—ಬ್ರಹ್ಮಚರ್ಯ, ಗಾರ್ಹಸ್ಥ್ಯ, ವಾನಪ್ರಸ್ಥ್ಯ, ಸನ್ಯಾಸ, ಎಂದು ನಾಲ್ಕು ಆಶ್ರಮಗಳು ದ್ವಿಜರಿಗೆ ವಿಹಿತಗಳಾಗಿವೆ. ಇವು ನಾಲ್ಕು ಆಶ್ರಮಗಳು ಒಂದು ಪುರುಷಾಯುಸ್ಸಿನ ನಾಲ್ಕು ಭಾಗಗಳು. ಬ್ರಹ್ಮವರ್ಚಸ್ಸನ್ನು ಬಯಸುವ ಬ್ರಾಹ್ಮಣನು ಅಯ್ದುವರ್ಷವಾದೊಡನೆ ಉಪನಯನವೆಂಬ ಕರ್ಮವನ್ನು ಮಾಡಿ ಆ ಹುಡುಗಗೆ ತ್ರಿಕರಣಗಳ ಶಿಕ್ಷಣದೊಡನೆ ವೃತ್ತ ಅಧ್ಯಯನ-ಕರ್ಮವಿದ್ಯಾಸಾಧನಾರ್ಥವಾಗಿ ಗುರುಕುಲವಾಸಮಾಡಿಸಬೇಕು. ಅಲ್ಲಿ ಆ ವಟುವು ಗುರುವು ಹೇಳಿದಂತೆ ಕೇಳುತ್ತ ಶೌಚಸದಾಚಾರಾದಿಗಳನ್ನೂ, ವೇದವೇದಾಂಗಗಳನ್ನೂ, ಅಭ್ಯಾಸಮಾಡುತ್ತ ೨೫-೩೦ ವರ್ಷ ಪರ್ಯಂತವಾಗಿ ಜಿತೇಂದ್ರಿಯನಾಗಿ ಇದ್ದು ಪ್ರಾಣಾಯಾಮಪರ್ಯಂತವಾದ ಯೋಗಾಂಗಚತುಷ್ಕವನ್ನೂ ಚೆನ್ನಾಗಿ ಕಲಿತುಕೊಂಡು, ಬಳಿಕ ಗುರುವಿನ ಅಪ್ಪಣೆಯನ್ನು ಪಡೆದು ಬಂದು ಗೃಹಸ್ಥನಾಗಬೇಕು.

೨೩. ಆ—ಬ್ರಹ್ಮವರ್ಚಸ್ಸು, ಯೋಗಾಂಗಚತುಷ್ಕ, ಎಂದರೇನು ?

ಉ—ಈಗಲೇ ಹೇಳಿದೆನಲ್ಲವೆ ? "ಸ್ಯಾದ್ಬ್ರಹ್ಮವರ್ಚಸಂ ವೃತ್ತಾಧ್ಯಯನರ್ದ್ಧಿಃ" ಎಂದಿರುವಮೇರೆಗೆ ವೃತ್ತಾಭಿವೃದ್ಧಿ, ಅಧ್ಯಯನಾಭಿವೃದ್ಧಿ, ಎಂದರೆ ಸದಾಚಾರಸದ್ವಿದ್ಯೆಗಳು ಇವೆರಡೂ ಸೇರಿ ಬ್ರಹ್ಮವರ್ಚಸವೆನಿಸುವುದು. ಆ ಸದಾಚಾರಗಳು ಇವು ಇವು ಎಂದು ವಿಸ್ತಾರವಾಗಿ "ಸದ್ವೃತ್ತರತ್ನಾವಳಿಯಲ್ಲಿ" ಹೇಳಲ್ಪಟ್ಟಿವೆ. ನೋಡಿರಿ. ಯೋಗಾಂಗಚತುಷ್ಕ-ಯಮ ನಿಯಮ ಆಸನ ಪ್ರಾಣಾಯಾಮಗಳು. ಯಮ-ಅಹಿಂಸೆ, ಸತ್ಯ, ಅಸ್ತೇಯ, ಬ್ರಹ್ಮಚರ್ಯ, ಅಕಲ್ಕತೆ-ದಂಭವಿಲ್ಲದೆ ಆರ್ಜವದಿಂದಿರುವುದು ; ನಿಯಮ-ಶೌಚ ಸ್ನಾನ ಮೌನ ಗುರುಶುಶ್ರೂಷಾಧ್ಯಯನಾದಿಗಳು. ಇವುಗಳನ್ನು ಸದಾ ಅನುಷ್ಠಿಸಬೇಕಾಗಿರುವುದರಿಂದ ಅವು ಅಡಗಿರುವ ಶ್ಲೋಕಗಳನ್ನು ಹೇಳುವೆನು.

ಶ್ಲೋ॥ "ಬ್ರಹ್ಮಚರ್ಯಂ ದಯಾ ಕ್ಷಾನ್ತಿರ್ಧ್ಯಾನಂ ಸತ್ಯ ಮಕಲ್ಕತಾ ।
ಅಹಿಂಸಾಸ್ತೇಯಮಾಧುರ್ಯ ದಮಾಶ್ಚೇತಿ ಯಮಾಃ ಸ್ಮೃತಾಃ ॥
ಸ್ನಾನಂ ಮೌನೋಪವಾಸೇಜ್ಯಾ ಸ್ವಾಧ್ಯಾಯೋಪಸ್ಥನಿಗ್ರಹಾಃ ।
ನಿಯಮಾ ಗುರುಶುಶ್ರೂಷಾ ಶೌಚಾಕ್ರೋಧಾ ಪ್ರಮಾದಿತಾಃ ॥ (ಯಾಜ್ಞ)"

ಇದರರ್ಥವು ಸ್ಪಷ್ಟವಾಗಿದೆಯಷ್ಟೆ. ಇನ್ನು ಆಸನ-"ಸ್ಥಿರಸುಖಮಾಸನಂ" ಎಂದು ತನ್ನ ದೇಹವು ಕರ್ಮೇಂದ್ರಿಯಗಳು ಯಾವಯಾವ ವಿಧವಾಗಿ ಇರಿಸಿಕೊಂ

ಡರೆ ಆ ಪ್ರಕಾರವಾಗಿಯೇ ಇರುತ್ತ ಧ್ಯಾನಾದಿಕರ್ಮಗಳಿಗೆ ಅನುಕೂಲವಾಗಿರುವುದು. ಇದು ಪದ್ಮಾಸನ ವೀರಾಸನ ಸ್ವಸ್ತಿಕಾಸನ ಸಿದ್ಧಾಸನ ಕುಕ್ಕುಟಾಸನ ಮಯೂರಾಸನ ಇತ್ಯಾದಿ ಭೇದದಿಂದ ನೂರಾರು ಬಗೆಯಾಗಿದೆ. ಪ್ರಾಣಾಯಾಮ-ರೇಚಕಪೂರಕ ಕುಂಭಕ ಭೇದದಿಂದ ತ್ರಿವಿಧವಾಗಿದೆ. ಬಲದಮೂಗಿನ ರಂಧ್ರದಿಂದ ಒಳಗಣ ವಾಯುವನ್ನು ಮೆಲ್ಲಗೆ ಹೊರಗೆ ಬಿಡುವುದು ರೇಚಕವು, ಎಡದಮೂಗಿನ ರಂಧ್ರದಿಂದ ಹೊರಗಣ ಶುದ್ಧವಾಯುವನ್ನು ಮೆಲ್ಲಗೆ ಒಳಗೆ ತುಂಬಿಕೊಳ್ಳುವುದು ಪೂರಕವು. ಹಾಗೆ ತುಂಬಿಕೊಂಡ ವಾಯುವನ್ನು ಒಳಗೇ ಸಾಧ್ಯವಾದಮಟ್ಟಿಗೆ ತಡೆದು ಇಟ್ಟುಕೊಳ್ಳುವ ಅಭ್ಯಾಸಮಾಡುವುದು ಕುಂಭಕವು. ಹೀಗೆ ಈ ರೇಚಕ ಪೂರಕ ಕುಂಭಕಗಳನ್ನು ಆಚರಿಸುವಾಗ ಮನಸ್ಸನ್ನು ಬೇರೇಕಡೆಗೆ ಬಿಡದೆ ಗಾಯತ್ರೀಮಂತ್ರವನ್ನು ಉಚ್ಚರಿಸುತ್ತ, ಆ ಮಂತ್ರಪ್ರತಿಪಾದ್ಯನಾದ ಪರಮಾತ್ಮನಲ್ಲಿಯೇ ಬುದ್ಧಿಯನ್ನು ಇರಿಸಿಕೊಂಡು, ತನ್ಮೂರ್ತಿಧ್ಯಾನವನ್ನೂ, ತದ್ಗುಣಚಿಂತನೆಯನ್ನೂ, ಮಾಡುವ ಅಭ್ಯಾಸಮಾಡುತ್ತ ಬರಬೇಕು. ಈ ಪ್ರಾಣಾಯಾಮದ ಕ್ರಮವು ಶ್ರುತಿಸ್ಮೃತಿಧರ್ಮಪದ್ಧತಿಯ (೧೧೪ ನೇ ಪುಟದ) ಲ್ಲಿ ವಿವರಿಸಲ್ಪಟ್ಟಿದೆ.

೨೪. ಪ್ರ—ಬ್ರಹ್ಮಚರ್ಯಧರ್ಮವಿಷ್ಟೇಸರಿಯೋ? ಇನ್ನೇನಾದರೂ ಕರ್ತವ್ಯವುಂಟೋ?

ಉ—ಉಂಟು. ಮುಖ್ಯವಾದುದು ಗುರುಕುಲವಾಸ, ಅಧ್ಯಯನ, ಶೌಚ, ಸ್ನಾನ, ಸಂಧ್ಯಾವಂದನತ್ರಯ, ದೇವಾರ್ಚನ, ದೇವರ್ಷಿಪಿತೃತರ್ಪಣ, ಅಗ್ನಿಕಾರ್ಯದ್ವಯ, ಭಿಕ್ಷಾಟನದಿಂದ ಸಾತ್ತ್ವಿಕಾಹಾರವನ್ನೇ ಸೇವಿಸುವುದು ಎಂದರೆ:—ಮನುಸ್ಮೃತಿ ಅ ೨ ರಲ್ಲಿ:—ಬ್ರಹ್ಮಚಾರಿಯಾದವನು—

ಶ್ಲೋ॥ ವರ್ಜಯೇನ್ಮಧು ಮಾಂಸಂಚ ಗಂಧಂ ಮಾಲ್ಯಂ ರಸಾನ್ ಸ್ತ್ರಿಯಃ।
ಶುಕ್ತಾನಿ ಯಾನಿ ಸರ್ವಾಣಿ ಪ್ರಾಣಿನಾಂ ಚೈವ ಹಿಂಸನಮ್ ॥೧೭೭॥

ಜೇನುತುಪ್ಪ ಮಾಂಸ ಗಂಧ ಪುಷ್ಪ ತಾಂಬೂಲ ಲವಣಾಮ್ಲ ಕಟುಕ್ಷಾರ ಗುಡ ಮುಂತಾದ ರಸವದ್ವಸ್ತುಗಳು, ಸಹಜಮಧುರರಸವಾದರೂ ಕಾಲದೇಶಸಂಸ್ಕಾರಾದಿಗಳಿಂದ ಹುಳಿಯಾಗತಕ್ಕ ದೋಸೆತಂಗುಳು ಮುಂತಾದುವು; ಇವೆಲ್ಲವನ್ನೂ ಬಿಟ್ಟು ಹವಿಷ್ಯಾನ್ನವನ್ನೇ ಸೇವಿಸಬೇಕು. ಸ್ತ್ರೀಭೋಗ ಹಿಂಸಾ ಸ್ತೇಯ ಕಾಮಕ್ರೋಧಾದಿಗಳನ್ನೂ, ದಿವಾಸ್ವಾಪವನ್ನೂ, ನೃತ್ತಗೀತವಾದ್ಯ ದ್ಯೂತಜನವಾದ ಪರಿವಾದ ಅನೃತಾದಿಗಳನ್ನೂ, ಬಿಡಬೇಕು.

ಹೀಗಿರುವಾವಟುವಿಗೆ, ಬ್ರಹ್ಮಚಾರಿಗೆ, ವೀರ್ಯವು ಶುದ್ಧವಾಗಿಯು ಅಧಿಕವಾಗಿಯು ಬೆಳೆದು ಓಜಸ್ಸನ್ನೂ ಬುದ್ಧಿಯನ್ನೂ ವೃದ್ಧಿಮಾಡುವುದು. ಬುದ್ಧಿವೃದ್ಧಿಯಿಂದ ವಿದ್ಯಾವೃದ್ಧಿ, ಆದರಿಂದ ವಿವೇಕವಿನಯ ವಿತ್ತಾದಿಗಳು ಪ್ರಾಪ್ತವಾಗುವುವು. ಇಂತಹವನು ಮುಂದಿನ ಆಶ್ರಮಗಳಲ್ಲಿ ಮಾಡಬೇಕಾದ ಯಜ್ಞಾದಿಗಳನ್ನು ನಡೆಯಿಸುವುದಕ್ಕೂ, ದೀರ್ಘಾಯುಷ್ಮದ್ದೃಢಭೂತ ಸತ್ಸಂತಾನವನ್ನು ಪಡೆಯುವುದಕ್ಕೂ, ಪರೋಪಕಾರಿಯೆನಿಸಿಕೊಂಡು ಪುಣ್ಯಕೀರ್ತಿಗಳನ್ನು ಸಂಪಾದಿಸಿಕೊಳ್ಳುವುದಕ್ಕೂ ಸಮರ್ಥನಾಗುವನು. ಬಾಲ್ಯದಲ್ಲಿ ಬ್ರಹ್ಮಚರ್ಯಾಶ್ರಮಧರ್ಮಗಳನ್ನು ಯಥಾವಿಧಿ ಅನುಷ್ಠಾನಮಾಡಿದವನೇ ಈ ಪ್ರಪಂಚದಲ್ಲಿ ಸಹಜವಾಗಿ ಪ್ರಾಪ್ತವಾಗುವ ಶೀತೋಷ್ಣ ಸುಖದುಃಖಾದಿದ್ವಂದ್ವಗಳನ್ನು ಸಹಿಸುವ ಧೀರನೆನಿಸಿಕೊಂಡು ಅನಾಯಾಸದಿಂದ ಐಹಿಕಸಂಸಾರಸೌಖ್ಯವನ್ನೂ, ಆಮುಷ್ಮಿಕಸದ್ಗತಿಯನ್ನೂ, ಪಡೆಯುವನು. ಅಂತಲ್ಲದೆ ಬಾಲ್ಯದಲ್ಲಿ ಗುರುಕುಲವಾಸದ ನಿರ್ಬಂಧವಿಲ್ಲದೆ ಯಥೇಚ್ಛಾಚಾರಿಯಾಗಿಯೋ ದುಸ್ಸಹವಾಸಾದಿಗಳಿಂದ ದುರಾಚಾರಿಯಾಗಿಯೋ ಬಳೆದವನು ಅಧ್ಯಯನಾದಿಗಳಿಲ್ಲದ ಅವಿವೇಕಿ ಅವಿನೀತನೆನಿಸಿ, ಅಲ್ಪಾಯುಸ್ಸಂತಾನಗಳನ್ನುಂಟುಮಾಡುತ್ತ ವಾರ್ಧಕದಲ್ಲಿ ಅಧಿಕಾಧಿವ್ಯಾಧಿಪೀಡಿತನಾಗುವುದರಿಂದ ತಾನೇನು ಸುಖಪಡುವನು ? ಪರರಿಗಿವನಿಂದೇನು ಉಪಕಾರವಾಗುವುದು ? ಆದರಿಂದೀಬ್ರಹ್ಮಚರ್ಯಾಶ್ರಮವೊಂದೇ ಸರ್ವಾಶ್ರಮಧರ್ಮಸಾಧನೆಗೂ ಮುಖ್ಯ ಬೀಜಭೂತವಾಗಿರುವುದರಿಂದ ಬೀಜಗಳನ್ನು ಬಚ್ಚಿಟ್ಟುಕೊಂಡಿದ್ದು ವ್ಯವಸಾಯಮಾಡುವ ರೈತನಂತೆ ಬ್ರಹ್ಮಚಾರಿಯೇ ಸತ್ಸುಖವನ್ನು ಹೊಂದತಕ್ಕವನು.

೨೫. ಅ—ಸು. ಇನ್ನು ಗೃಹಸ್ಥಾಶ್ರಮಧರ್ಮಗಳು ಯಾವುವು ?

ಉ—ವೇದಾಧ್ಯಯನ, ಗುರುಕುಲವಾಸ, ಬ್ರಹ್ಮಚರ್ಯಾಶ್ರಮಧರ್ಮಗಳನ್ನು ಯಥಾಯೋಗ್ಯವಾಗಿ ಅನುಷ್ಠಿಸಿ ಗುರುಗಳ ಅನುಜ್ಞೆ ಪಡೆದುಕೊಂಡು, ಸಲಕ್ಷಣವಾದ ಕನ್ನೆಯನ್ನು ಮದುವೆಯಾದಮೇಲೆ ಆ ಧರ್ಮಚಾರಿಣಿಯೊಡನೆ ಯಥಾಶಕ್ತಿ ಯಜ್ಞದಾನತಪಃ ಕರ್ಮಗಳನ್ನು ಆಚರಿಸುತ್ತ ಬರಬೇಕು. ಈ ಗೃಹಸ್ಥಧರ್ಮವೇ ಪ್ರಪಂಚದ ಏಳಿಗೆಗೆ ಮಹೋಪಕಾರವಾಗಿರುವುದು.

ಶ್ಲೋ॥ " ಋಷಯಃ ಪಿತರೋ ದೇವಾ ಭೂತಾನ್ಯತಿಥಯಸ್ತಥಾ ।
ಆಶಾಸತೇ ಕುಟುಂಬಿಭ್ಯಸ್ತೇಭ್ಯಃ ಕಾರ್ಯಂ ವಿಜಾನತಾ ॥" ಮನು ೩-೮೦ ॥

(ದೇವತೆಗಳು ಪಿತೃಗಳು ಋಷಿಗಳು ಅತಿಥಿಗಳು ಇನ್ನೂ ಸರ್ವ ಪ್ರಾಣಿಗಳೂ ಈ ಗೃಹಸ್ಥರ ಕಡೆಯಿಂದಲೇ ತಮಗೆ ಜೀವನವೆಂದು ತಿಳಿದವರಾಗಿ ಅನ್ನಾದಿಗಳಿಗೋ

ಸ್ಕರ ಅವರನ್ನು ಪ್ರಾರ್ಥಿಸುತ್ತಾರೆ.) ಎಂದಿರುವುದರಿಂದ ಎಲ್ಲಾ ಆಶ್ರಮಿಗಳಿಗೂ ಈ ಗೃಹಿಧರ್ಮವು ಸದಾಪೋಷಕವಾಗಿದೆಯೆಂದು ತಿಳಿಯಬೇಕು.

ಉಭಯಲೋಕಸಾಧಕವಾಗಿರುವ ಮೊದಲೇ ಶಿಷ್ಟಲಕ್ಷಣದಲ್ಲಿ ಪ್ರಸ್ತಾಪಿಸಿದ್ದ ಯಜ್ಞ ದಾನ ತಪಃ ಕರ್ಮಗಳು ಸರ್ವಸಾಧಾರಣವಾಗಿದ್ದರೂ ಗೃಹಸ್ಥಗೆ ಮಾತ್ರ ವಿಶೇಷ ವಿಹಿತವಾಗಿರುವುವು. ಸರ್ವಾನಿಷ್ಟಗಳನ್ನೂ ಕಳೆದು ಸರ್ವಸೌಖ್ಯವನ್ನೂ ಉಂಟುಮಾಡುವುವು.

" ಕುರ್ವನ್ನೇವೇಹ ಕರ್ಮಾಣಿ ಜಿಜೀವಿಷೇಚ್ಛತಗ್ ಸಮಾಃ "

" ಯಜ್ಞದಾನತಪಃಕರ್ಮ ನತ್ಯಾಜ್ಯಂ ಕಾರ್ಯಮೇವತತ್ "

ಎಂದು ಇತ್ಯಾದಿ ವಚನಗಳಿಂದ ಬಿಡಕೂಡದಾದ ಸತ್ಕರ್ಮಗಳಾಗಿವೆ. ಆದುದರಿಂದ ಈ ವೊಂದು ಕರ್ಮಭಾಗವನ್ನೂ ಬೇರೆಬೇರೆಯಾಗಿ ಮುಂದೆ ವಿವರಿಸಿ ಹೇಳುವೆನು.

ಇಂತು ' ಸಾಧುವೃತ್ತಿ ' ಎಂಬ ಈ ಭಾಗವು ಮುಗಿದುದು

## ಸುಪಂಥ ಗ್ರಂಥಮಾಲೆ.

ನಂ.

1. ವರ್ಣಾಶ್ರಮಧರ್ಮರಹಸ್ಯ 0—4—0
2. ಅನಿಬೆಸಂಟಮ್ಮನವರ ಚರಿತ್ರಸಾರ 0—1—0
3. ಬ್ರಹ್ಮಜ್ಞಾನಸಮಾಜ ಸಂದೇಶ 0—2—0
4. ಭಾರತಕಥಾಸಾರ ಪೂರ್ತಿ 1—0—0

(4 ಭಾಗಗಳು ಬೇರೆಬೇರೆಯಾಗಿ ಪ್ರತಿಯೊಂದೂ 3 ಆಣೆ)

5. ಪರೋಪಕಾರಕ್ರಮ 0—1—0
6. ಬ್ರಹ್ಮವಿದ್ಯಾದರ್ಶ 1—0—0

(ಬೇರೆಬೇರೆ 1, 2, 3, 4 ನೇ ಭಾಗಗಳು ಕ್ರಮವಾಗಿ 4, 4, 5, 3 ಆಣೆಗಳು)

7. ಪರಮಗುರುಪಾದಪ್ರಸಾದ 0—2—0
8. ಸ್ತ್ರೀಧರ್ಮ 0—1—0
9. ಮೋಕ್ಷಮಾರ್ಗಪ್ರದೀಪಿಕೆ 0—4—0
10. ಮನುಷ್ಯನು ಅವನ ದೇಹಗಳು 0—4—0
11. ಬ್ರಹ್ಮಸೂತ್ರಸಾರ (ತಯಾರಾಗುತ್ತಿದೆ)